Photo by A. L. Syed



ಬಹುಮಾನ
ಪಡೆದ ಶೀರ್ಷಿಕೆ

ಸಾಹಸಿಗರು

ಕಳಿಸಿದವರು:
ಕೆ. ದೇವರಾಜರಾವ್, ಚಿತ್ರದುರ್ಗ

# ಈ ಸಂಚಿಕೆಯಲ್ಲಿ








MORTON

## ಸೂಚನೆ

ಬರುವ ತಿಂಗಳ 'ಚಂದಮಾಮ' ಸಂಚಿಕೆಗಳನ್ನು ಈ ತಿಂಗಳ ಕಡೇ ವಾರದಲ್ಲೇ ಪೋಸ್ಟ್ ಮಾಡಲಾಗುತ್ತದೆ. ಆ ಸಂಚಿಕೆಗಳು ತಕ್ಕ ಕಾಲದಲ್ಲಿ ನಿಮಗೆ ಸೇರದಿದ್ದರೆ, ನಿಮ್ಮೂರ ಪೋಸ್ಟಾಫೀಸಿನಲ್ಲಿ ನೀವು ಕಂಪ್ಲೇಂಟು ಕೊಟ್ಟು, ಆ ಸಂಗತಿ ನಮಗೂ ತಿಳಿಸಬೇಕಾಗಿ ಕೋರಲಾಗಿದೆ.

ಚಂದಮಾಮ ಪಬ್ಲಿಕೇಷನ್ಸ್,
ವಡಪಳನಿ.... ಮದ್ರಾಸ್–26.

ತಾ. 21-11-53ರಲ್ಲಿ ಪ್ರಸ್ ಕಮಿಷನ್ ಸಭ್ಯರು ಚಂದಮಾಮಾ ಕಾರ್ಯಾಲಯಕ್ಕೆ ದರ್ಶನವಿತ್ತರು. ಅವರಿಗೆ ಕೊಟ್ಟ ಸತ್ಕಾರದಲ್ಲಿ ಸರ್ವಶ್ರೀ: ಗೋಪಾಲನ್, ಎ. ಆರ್. ಭಟ್, ಡಾ. ಸಿ. ಪಿ. ರಾಮಸ್ವಾಮಿ ಅಯ್ಯರ್, ಎ. ಡಿ. ಮಣಿ ಮತ್ತು ಬಿ. ನಾಗಿರೆಡ್ಡಿ.

ಕೆಳಗೆ: ಮುದ್ರಣಾಲಯದಲ್ಲಿ ಕಮಿಷನ್ ಸಭ್ಯರು.

# ಚಂದಮಾಮ

ಸಂಚಾಲಕರು : 'ಚಕ್ರಪಾಣಿ'

---

**ಕ**ನ್ನಡ ನಾಡಿನ ಸಣ್ಣವರು ದೊಡ್ಡವರುಗಳಿಗೆಲ್ಲಾ ಜನವರಿಯ ಶುಭಾಶಯಗಳು. ನಾವಿಲ್ಲಿ ೧೨ನೆಯ ಸಂಪುಟಕ್ಕೆ ಪ್ರವೇಶಿಸುತ್ತಾ, 'ಶಬ್ದವೇಧಿ'ಯನ್ನು ಮುಗಿಸಿ 'ಧೂಮಕೇತು' ಧಾರಾವಾಹಿ ಕಥೆಯ ಆಗಮನದ ಚಿತ್ರವನ್ನು ತೋರಿಸಿದ್ದೇವೆ. ಈ ಚಿತ್ರದಲ್ಲಿರುವ ಪಾತ್ರಗಳೂ ಘಟನೆಗಳೂ ಅಲ್ಲದೆ ಇನ್ನೂ ಹಲವಾರು ಕೌತುಕ ವಿಷಯಗಳಿಂದ ತುಂಬಿಕೊಂಡು ಆ ಧಾರಾವಾಹಿ ಬರುವ ಸಂಚಿಕೆಯಿಂದ ಪ್ರಾರಂಭವಾಗುತ್ತದೆ. ಇದುವರೆಗೆ ನೀವೆಲ್ಲಾ "ಚಂದಮಾಮ"ನ ಮೇಲೆ ತೋರಿಸುತ್ತಾ ಬಂದ ಆದರದಿಂದ ಉತ್ಸಾಹಗೊಂಡು, ಈಗ ಮತ್ತೆ ನಾಲ್ಕು ಪುಟಗಳನ್ನು ಹೆಚ್ಚಿಸಿಕೊಂಡು ೬೪ ಪುಟಗಳೊಂದಿಗೆ ಹೊರಟಿದ್ದಾನೆ "ಚಂದಮಾಮ." ಅಂದ ಮೇಲೆ ವಿಷಯ ವೈವಿಧ್ಯತೆಗಳೂ ಹೆಚ್ಚಿವೆ ಎಂದು ಬೇರೆ ಹೇಳಬೇಕೇನು?

---

ಸಂಪುಟ ೧೨ : ಜನವರಿ ೧೯೫೪ : ಸಂಚಿಕೆ ೧



SANKAR

# ಅಸಲು ಮಾತು

ಕಣ್ಣಡಕದ ಪರೀಕ್ಷೆಯಲ್ಲಿ
ಗಣ್ಯನೆನಿಸಿದ ಕಣ್ಣನೆಂಬವ
ಕಣ್ಣನೂರಿನ ಕೇರಿಯೊಳಗೆ
ಕಣ್ಣಡಕ ದಂಗಡಿಯು ನಿಟ್ಟನು.

ಯಾರ ಕಣ್ಣಿಗೆ ಹೇಗೆ ಬೇಕೋ
ಯಾವ ಬಣ್ಣಗಳೆಂತು ಬೇಕೋ
ಹಾಗೆ ಬಗೆಬಗೆ ಕಣ್ಣಡಕಗಳ
ಕಾಣುವಂತಿಟ್ಟೆದಿರಿನಲ್ಲಿಯೆ,

" ಓದಲಿಕೆ ಕಷ್ಟಪಡುವವರು
ಬನ್ನಿರಿಲ್ಲಿದೆ ಒಂದುಪಾಯ !"
ಎಂದು ಬೋರ್ಡನು ಬರೆದು ನಿಲ್ಲಿಸಿ
ಹಿಂದೆ ತಾಕುಳಿತಿರಲು, ಆಗ

ಹಳ್ಳಿಕಡೆಯಿಂದೊಬ್ಬ ಬಂದು
" ಏನು ಬರೆದಿದೆ ಇಲ್ಲಿ ?" ಎಂದು
ಬಳಿಯಲಿದ್ದೊಬ್ಬರನು ಕೇಳಲು
ಓದಿ ಕೇಳಿಸಿ ಹೋದರವರು.




ಹೊಕ್ಕು ಹಳ್ಳಿಗನೊಳಗೆ ಬೇಗ
" ಹೊರಗೆ ಬರೆದುದ ತಿಳಿದು ಬಂದೆ
ಓದಲೇನು ಉಪಾಯ ?"ವೆಂದು
ಕೇಳೆ, ಕಣ್ಣನು ಅವನ ಕೂಡಿಸಿ

" ನಿಮಿಷದೊಳಗೋದಿಸುವೆ " ನೆಂದನು.
ಕಣ್ಣಡಕವೊಂದಿಟ್ಟು, ಕಣ್ಣಿಗೆ

" ನವಗಿರಿನಂದ "

ಪುಸ್ತಕವನೊಂದಿತ್ತು ಕೈಗೆ
" ಓದಿನೋಡಿದು ಹೇಗಿದೆಂದು "

ಕೇಳಿ ಹಳ್ಳಿಗ ಪುಟವ ತಿರುವುತ
"ಊಹು" ಎನ್ನಲು, "ನೋಡಿದೆ"ನ್ನುತ
ದಪ್ಪ ಕಣ್ಣಡಕವನು ಇಟ್ಟನು.
" ಏನು ತಿಳಿಯುವುದಿಲ್ಲವಲ್ಲಾ!"

ಎಂದನಾ ಹಳ್ಳಿಗನು; ಆಗ
" ಓಹೊ! ಸರಿಸರಿ ಇದನು ನೋಡಿದು
ಭೂತ ಕನ್ನಡಿ ದುರ್ಬೀನಂತಿದೆ"
ಎನುತ ಮತ್ತೊಂದನ್ನು ತಗಲಿಸಿ

" ನಿನಗಿದೇ ಸರಿ" ಎಂದ ಕಣ್ಣ.
ನೋಡಿ ಹೆದರುತ ನುಡಿದ ಹಳ್ಳಿಗ:
" ಏನಿದಬ್ಬಾ! ಭೂತದಂತಿದೆ!
ಒಂದೂ ತಿಳಿಯದು ನಿಮ್ಮುಪಾಯವು

ಇದೇ ಏನ್? ಫು! ವ್ಯರ್ಥವಯ್ಯ!"
ಕೇಳಿ ಕಣ್ಣನು ಅವನ ಕಣ್ಣನು
ಒಳಹೊರಗೆ ಚೆನ್ನಾಗಿ ಪರಿಕಿಸಿ
ಕುರುಡನಲ್ಲೆಂದರಿತು ಕೇಳಿದ:

" ಅಸಲು ನಿನಗೋದಲಿಕೆ ಬರುವುದೆ?"
" ಓದುಬಂದರೆ ಇಲ್ಲಿಗೇತಕೆ
ಬರುವೆ?" ನೆನ್ನುತ ನಡೆದ ಹಳ್ಳಿಗ.
ಕಣ್ಣ ಕಣ್ ಕಣ್ ಬಿಟ್ಟು ನೋಡಿದ!






## ಮುಖಚಿತ್ರ

**ಸುಂ**ದೋಪ ಸುಂದರ ಕಥೆಯನ್ನು ಕೇಳಿದಮೇಲೆ ಪಂಚಪಾಂಡವರು, ತಮ್ಮೊಳಗೂ ಜಗಳ ತಂಟೆಗಳು ಬಾರದಂತೆ ಎಚ್ಚರಿಕೆ ತೆಗೆದುಕೊಂಡರು. ಏನಾದರೂ ತಪ್ಪು ಮಾಡಿದವರು ಒಂದು ವರ್ಷ ತೀರ್ಥಯಾತ್ರೆ ಮಾಡಿಕೊಂಡು ಬರಬೇಕೆಂದೂ ತಮ್ಮೊಳಗೆ ನಿಷ್ಕರ್ಷೆ ಮಾಡಿಕೊಂಡರು. ಹೀಗಿರುವಾಗ,

ಒಮ್ಮೆ ಅರ್ಜುನನಿಗೆ ಒಂದು ಬಹಳ ಅವಸರದ ಕೆಲಸಬಂತು: ಯಜ್ಞಯಾಗಗಳನ್ನು ಮಾಡುವ ಸಾತ್ವಿಕರಾದ ಬ್ರಾಹ್ಮಣರ ಗೋವುಗಳನ್ನು ಯಾರೋ ಕಳ್ಳರು ಅಪಹರಿಸಿಕೊಂಡು ಹೋದರೆಂದು ಕೆಲವು ಬ್ರಾಹ್ಮಣರು ಅರ್ಜುನನೊಡನೆ ದೂರಿಕೊಂಡರು. ಅರ್ಜುನನು ಆ ಕಳ್ಳರನ್ನು ಹಿಡಿಯಲು ಸನ್ನದ್ಧನಾಗಿ ಧನುರ್ಬಾಣಗಳನ್ನು ತರಲು ಶಸ್ತ್ರಾಗಾರವನ್ನು ಹೊಕ್ಕನು. ಆಗ ಅಲ್ಲಿ ಅಣ್ಣ ಧರ್ಮರಾಯನು ದ್ರೌಪದಿಯೊಂದಿಗೆ ವಿಹಾರ ಮಾಡುತ್ತಿರುವುದನ್ನು ಕಂಡು 'ಅಯ್ಯೊ! ಹಿರಿಯನಾದ ಅಣ್ಣನ ಬಳಿಗೆ ಮುಂದಾಗಿ ತಿಳಿಸದೆ ಬಂದು ಅಗೌರವ ಪಡಿಸಿಬಿಟ್ಟೆ. ಈ ತಪ್ಪಿಗೆ ತೀರ್ಥಯಾತ್ರೆ ಹೋಗಬೇಕಾಯಿತು' ಎಂದು ನಿಶ್ಚಯಿಸಿದನು. ಬಳಿಕ ಅವಸರವಾಗಿ ಬಿಲ್ಲುಬಾಣಗಳನ್ನೊಯ್ದು, ಕಳ್ಳರನ್ನು ಓಡಿಸಿ ಗೋವುಗಳನ್ನೆಲ್ಲ ಹಿಂದಿರುಗಿಸಿ ತಂದು ಆ ಬ್ರಾಹ್ಮಣರಿಗೆ ಒಪ್ಪಿಸಿದನು.

ಅನಂತರ ತಡಮಾಡದೆ ತೀರ್ಥಯಾತ್ರೆಗೆ ಹೋಗುವೆನೆಂದು ಅಣ್ಣನೊಡನೆ ಅನುಜ್ಞೆ ಕೇಳಿದನು. 'ಅದೇನೂ ದೊಡ್ಡ ತಪ್ಪಲ್ಲ'ವೆಂದು ಧರ್ಮರಾಯನು ಮೊದಲು ಅಸಮ್ಮತಿ ಪಟ್ಟರೂ, 'ತಿಳಿದು ಮಾಡಿದರೂ ತಿಳಿಯದೆ ಮಾಡಿದರೂ ತಪ್ಪು ತಪ್ಪೆ' ಎಂದು ಸಾಧಿಸಿ ಅನುಜ್ಞೆ ಪಡೆದು ಅರ್ಜುನನು ತೀರ್ಥಯಾತ್ರೆಗೆ ಹೊರಟೇ ಬಿಟ್ಟನು.

ಹೀಗೆ ಅರ್ಜುನನು ದೇಶದೇಶಗಳನ್ನು ತಿರುಗುತ್ತ ಗಂಗಾತೀರವನ್ನು ಸೇರಿದನು. ಅಲ್ಲಿ ಅವನು ಗಂಗಾನದಿಯಲ್ಲಿ ಸ್ನಾನ ಮಾಡುವಾಗ, ನದಿಯೊಳಗೆ ವಾಸಿಸುತ್ತಿದ್ದ 'ಉಲೂಪಿ' ಎಂಬ ನಾಗಕನ್ಯೆ ಅವನನ್ನು ತನ್ನ ಶಕ್ತಿಯಿಂದ ಆಕರ್ಷಣೆಮಾಡಿಕೊಂಡು ನಾಗಲೋಕಕ್ಕೆ ಕರೆದೊಯ್ದಳು. ಅಲ್ಲಿ ಅರ್ಜುನನನ್ನು ಕುರಿತು—"ನಾನು ನಿನ್ನನ್ನು ಸ್ವಯಂವರದಿಂದ ವರಿಸಿದ್ದೇನೆ. ನೀನು ನನ್ನ ಪಾಣಿಗ್ರಹಣಮಾಡಿ ಉದ್ಧರಿಸಬೇಕು" ಎಂದು ಪ್ರಾರ್ಥಿಸಿಕೊಂಡಳು. ಅರ್ಜುನನು ಅವಳನ್ನು ಗಾಂಧರ್ವ ವಿಧಿಯಿಂದ ವರಿಸಿ, ನಂತರ ತನ್ನ ಕರ್ತವ್ಯವನ್ನು ಅವಳಿಗೆ ತಿಳಿಸಿ, ಒಂದು ದಿನ ಅಲ್ಲಿದ್ದು ಮತ್ತೆ ತೀರ್ಥಯಾತ್ರೆಗೆ ಹೊರಟನು. ಉಲೂಪಿ ಜಲಚರಗಳೆಲ್ಲಾ ಅರ್ಜುನನಿಗೆ ವಶವಾಗಿರುವಂತೆ ವರವನ್ನು ಕೊಟ್ಟಳು.




ದಿಲೀಪಮಹಾರಾಜನ ಪಟ್ಟದರಸಿಯ ಹೆಸರು ಸುದಕ್ಷಿಣಾದೇವಿ. ಆ ದಂಪತಿಗಳಿಗೆ ಸಕಲ ಸೌಭಾಗ್ಯಗಳಿದ್ದರೂ ಸಂತಾನ ಮಾತ್ರ ಪ್ರಾಪ್ತವಾಗಿರಲಿಲ್ಲ. ಆದುದರಿಂದ ಆತನು ಪತ್ನೀಸಮೇತನಾಗಿ ಗುರುಗಳಾದ ವಸಿಷ್ಠ ಮಹರ್ಷಿಗಳ ಹತ್ತಿರ ಹೋಗಿ, ತನ್ನ ವಂಶವು ಉಳಿಯುವ ಚಿಹ್ನೆಗಳಿರುವುದೋ ಇಲ್ಲವೋ ಹೇಳಬೇಕೆಂದು ಕೇಳಿಕೊಂಡನು.

ಮಹರ್ಷಿಯ ಹತ್ತಿರ ನಂದಿನಿ ಎಂಬ ಗೋವು ಇತ್ತು. "ಈ ಗೋವು ಸಾಮಾನ್ಯವಾದುದಲ್ಲ. ಹಿಂದೆ ನೀನು ಕಾಮಧೇನುವನ್ನು ಅಗೌರವ ಪಡಿಸಿದ್ದೀ. ಇದು ಕಾಮಧೇನುವಿನ ಮಗಳು. ನೀವು ದಂಪತಿಸಹಿತ ಈ ಗೋವನ್ನು ಸೇವೆ ಮಾಡಿದರೆ, ನಿಮ್ಮ ಕೋರಿಕೆ ಈಡೇರುವುದು" ಎಂದು ವಸಿಷ್ಠರು ಸಲಹೆ ಕೊಟ್ಟರು.

ರಾಜದಂಪತಿಗಳು ದಿನಾ ಮುಂಜಾನೆ ಎದ್ದು ಸ್ನಾನಮಾಡಿದ ತರುವಾಯ ಆ ಗೋವನ್ನು ಪುಷ್ಪಗಳಿಂದ ಪೂಜಿಸುವರು. ಕರು ಹಾಲು ಕುಡಿದ ತರುವಾಯ ರಾಜನು ಆ ಧೇನುವನ್ನು ಮೇವಿಗಾಗಿ ಅಡವಿಗೆ ಅಟ್ಟಿಕೊಂಡು ಹೋಗುವನು. ಅದಕ್ಕೆ ಯಾವ ಅಪಾಯವೂ ಸಂಭವಿಸದಂತೆ, ಕಣ್ಣಿನ ರೆಪ್ಪೆಯೋಪಾದಿಯಲ್ಲಿ ಕಾಪಾಡುತ್ತಿದ್ದು ಸಾಯಂಕಾಲದ ವರೆವಿಗೂ ಮೇಯಿಸಿ ಮನೆಗೆ ಅಟ್ಟಿಕೊಂಡು ಬರುತ್ತಿದ್ದ ದಿಲೀಪ. ಈರೀತಿ ಇಪ್ಪತ್ತೊಂದು ದಿನಗಳನ್ನು ಕಳೆದನು.

ಇಪ್ಪತ್ತೆರಡನೆಯ ದಿನ ಯಥಾಪ್ರಕಾರ ರಾಜನು ನಂದಿನೀಧೇನುವನ್ನು ಅಡವಿಗೆ ಹೊಡೆದುಕೊಂಡು ಹೋದನು. ಅದು ಹಿಮವತ್ಪರ್ವತದಕಡೆ ದಾರಿಹಿಡಿಯಿತು. ಆ ಪರ್ವತಗಳ ಸೊಗಸುಗಳನ್ನು ನೋಡುತ್ತಾ ರಾಜನು ಕ್ಷಣಕಾಲ ನಂದಿನಿಧೇನುವಿನ ವಿಚಾರವನ್ನೇ ಮರೆತುಬಿಟ್ಟ. ಅಷ್ಟರಲ್ಲಿ ಅದು ಒಂದು ಗುಹೆಯನ್ನು ಪ್ರವೇಶಿಸಿತು.

ಕೂಡಲೇ ಯಾವುದೋ ಆಪತ್ತಿನಲ್ಲಿ ಸಿಕ್ಕಿಕೊಂಡಂತೆ ಅದು 'ಅಂಬಾ' ಎಂದು ಕೂಗಿತು. ಆ ಆರ್ತನಾದ ಕೇಳಿದ ಕೂಡಲೇ ರಾಜನು ಬೆಚ್ಚಿಬಿದ್ದು, ಗೋವನ್ನು ಹುಡುಕುತ್ತಾ ಓಡಿ

ಗೌರೀಶಂಕರ ಲಕ್ಷ್ಮಣ ಶುಕ್ಲ




ಬಂದು ಗುಹೆಯನ್ನು ಪ್ರವೇಶಿಸಿದ. ಅಲ್ಲಿ ಗೋವಿನಮೇಲೆ ಒಂದು ಸಿಂಹವು ಹಾರಿ ಕುಳಿತು, ಅದನ್ನು ಭಕ್ಷಿಸಲು ಸಿದ್ಧವಾಗಿರುವ ದೃಶ್ಯ ಕಾಣಿಸಿತು. ಕೂಡಲೇ ರಾಜನು ಬಾಣ ಬಿಡಲು ಸಿದ್ಧನಾದ.

ಆದರೆ ಅದೇನು ವಿಚಿತ್ರವೋ ಆತನ ಕೈ ಸ್ತಂಭಿಸಿತು. ಬಾಣವನ್ನು ಹೊರಗೆ ತೆಗೆಯಲಾಗಲಿಲ್ಲ. ಆಶ್ಚರ್ಯ ಮತ್ತು ಕೋಪದಿಂದ ನಿಂತಿದ್ದ ರಾಜನನ್ನು ಕುರಿತು ಆ ಸಿಂಹವು ಮಾನವ ಭಾಷೆಯಲ್ಲಿ ಹೀಗೆ ನುಡಿಯಿತು:

" ಪ್ರಯೋಜನವಿಲ್ಲ. ನೀನು ನನ್ನ ಮೇಲೆ ಬಾಣಬಿಟ್ಟರೂ ಸಹ ಅದು ನನ್ನನ್ನೇನೂ ಮಾಡಲಾರದು. ಏಕೆಂದರೆ ನಾನು ಪರಮೇಶ್ವರನ ಆಪ್ತನಾದ ಕುಂಭೋದರ.

ಆತನು ಎತ್ತನ್ನೇರುವಾಗ ನನ್ನ ಬೆನ್ನಿನಮೇಲೆ ಹೆಜ್ಜೆಯನ್ನಿಟ್ಟು ಹತ್ತುತ್ತಾನೆ. ಆತನೇ ನನ್ನನ್ನು ಸಿಂಹವನ್ನಾಗಿ ಬದಲಾಯಿಸಿ, ಇಲ್ಲಿ ಕಾವಲಿಟ್ಟಿದ್ದಾನೆ. ಇಲ್ಲಿಗೆ ಬಂದ ಯಾವ ಜಂತುವನ್ನೇ ಆಗಲೀ ಹಿಡಿದು ತಿನ್ನುವ ಹಕ್ಕು ನನಗೆ ಆತನು ಕೊಟ್ಟಿದ್ದಾನೆ. ಅದೋ, ಅಲ್ಲಿರುವ ದೇವದಾರು ಮರವನ್ನು ನೋಡು. ಅದನ್ನು ಪಾರ್ವತಿದೇವಿ ತುಂಬಾ ಜೋಪಾನವಾಗಿ ಬೆಳೆಸಿದಳು. ಒಂದು ದಿನ ಕಾಡಾನೆಯೊಂದು ಆ ಮರಕ್ಕೆ ತನ್ನ ಮೈಯನ್ನು ತಿಕ್ಕಿಕೊಂಡಿತು. ಅದರಿಂದಾಗಿ ಆ ಮರದ ಅಷ್ಟೊಂದು ಪ್ರದೇಶದ ತೊಗಟೆ ಕಳಚಿಬಿತ್ತು. ಆಗ ಪಾರ್ವತಿದೇವಿ ತುಂಬಾ ವ್ಯಾಕುಲಗೊಂಡಳು. ಆದುದರಿಂದಲೇ ಪರಮೇಶ್ವನು ಆ ಮರವನ್ನು ಯಾರೂ ಹಾಳುಮಾಡದಂತೆ ನೋಡಿಕೊಳ್ಳಲು ನನ್ನನ್ನು ಈ ರೂಪದಲ್ಲಿ ಕಾವಲಿರಿಸಿರುವನು. ಇದು ವಿಷಯ. ನೀನೇನೂ ಮಾಡುವಂತೆ ಇಲ್ಲ. ಈ ಧೇನುವಿನ ಆಯುಸ್ಸು ಇಂದಿಗೆ ಮುಗಿಯಿತು. ನೀನು ಹೋಗಬಹುದು" ಎಂದಿತು.

ಆದರೆ ದಿಲೀಪರಾಜನು ಅಲ್ಲಿಂದ ಕದಲಲಿಲ್ಲ. " ಶಿವನ ಪ್ರಭಾವದಿಂದ ನನ್ನ ಹಸ್ತವು ಸ್ತಂಭಿಸಿಹೋಯಿತು. ಆದುದರಿಂದ ನಾನು ಈ ಧೇನುವನ್ನು ನನ್ನ ಬಾಣಗಳಿಂದ ಕಾಪಾಡಲಾರೆ. ಆದರೆ ಇದಕ್ಕೆ ಬದಲಾಗಿ ನಾನೇ ನಿನಗೆ ಆಹಾರವಾಗುವೆನು. ಅದನ್ನು ಬಿಟ್ಟುಬಿಡು. ಪಾಪ, ಅದರ ಕರು ಹಸಿವಿನಿಂದ

ಹಾಲಿಗಾಗಿ ಅಳುತ್ತಿರಬಹುದು. ಆ ಕರುವಿನ ಮೇಲಾದರೂ ಕರುಣೆಯಿಟ್ಟು ಈ ಗೋವನ್ನು ಬಿಟ್ಟುಬಿಡು. ನನ್ನ ಗುರುಗಳಾದ ವಸಿಷ್ಠರು ಈ ಗೋವು ಇಲ್ಲದಿದ್ದರೆ ತುಂಬಾ ಪೇಚಾಡಿಕೊಳ್ಳುವರು" ಎಂದನು.

ಸಿಂಹ ನಗುತ್ತಾ "ನೀನೊಬ್ಬ ಶತಮೂರ್ಖನಂತೆ ಮಾತಾಡುವೆ. ಈ ಗೋವು ಇಲ್ಲದಿದ್ದರೆ ನಿನ್ನ ಗುರುವು ಪೇಚಾಡುವರೆಂದು ತೋರಿದರೆ ನಿನ್ನ ಗೋಶಾಲೆಯಿಂದ ಆತನಿಗೆ ಕೋಟ್ಯಾನುಕೋಟಿ ಹಸುಗಳನ್ನು ಒದಗಿಸ ಬಲ್ಲ ಶಕ್ತಿ ನಿನಗಿದೆ. ಹಾಗಿರುವಲ್ಲಿ ಒಂದು ಗೋವಿಗಾಗಿ ಭೂಮಂಡಲವನ್ನೆಲ್ಲಾ ಆಳುವ ಚಕ್ರಾಧಿಪತಿಯಾದ ನೀನು ಪ್ರಾಣ ಬಿಡುವುದೆನ್ನುವುದು ಸರಿಕಾಣಿಸದು. ನೀನು ಬದುಕಿದ್ದರೆ ಕೋಟ್ಯಾಂತರ ಜನರ ಪ್ರಾಣಗಳನ್ನು ತಂದೆಯಂತೆ ಕಾಪಾಡುವೆ. ಇದು ನಿನಗೆ ಹೊಳೆಯಲಿಲ್ಲವೇ?" ಎಂದಿತು.

ಈ ಮಾತು ಕೇಳಿ ನಂದಿನಿಧೇನು ಮರುಕದಿಂದ ದಿಲೀಪನನ್ನು ನೋಡಲು ಪ್ರಾರಂಭಿಸಿತು. ಆಗ ರಾಜನು ಸಿಂಹದೊಂದಿಗೆ ನಾನು "ಭೂಲೋಕಕ್ಕೆಲ್ಲಾ ಒಡೆಯನೆಂದು ಹೊಗಳಿದೆ. ಆಪತ್ತಿನಲ್ಲಿರುವ ಈ ಧೇನುವಿನ ಪ್ರಾಣವನ್ನು ರಕ್ಷಿಸಲಾರದ ನನ್ನ ಸಾರ್ವಭೌಮತ್ವವೇಕೆ? ನೀನು ಈ ದೇವದಾರು ವೃಕ್ಷವನ್ನು ಹೇಗೆ ಕಾಪಾಡುತ್ತಿರುವೆಯೋ ಅದೇರೀತಿ ಈ ಹಸುವನ್ನು ನಾನು ಕಾಪಾಡುತ್ತಿದ್ದೇನೆ. ಇದನ್ನು ಬಿಟ್ಟು ತೆರಳುವುದು




ನ್ಯಾಯವೇ? "ಒಂದು ಹಸುವಿಗಾಗಿ ನಾನು ಪ್ರಾಣ ತ್ಯಜಿಸ ಕೂಡದೆಂದು ಬುದ್ಧಿ ಹೇಳುವೆ. ಆದರೆ ಇದು ಇತರ ಹಸುಗಳಂತಲ್ಲ! ಕಾಮಧೇನುವಿನ ಪುತ್ರಿ. ಆದುದರಿಂದ ನನ್ನ ಶರೀರವನ್ನು ಬಲಿಗೊಂಡು ನನ್ನ ಕೀರ್ತಿಯನ್ನು ಉಳಿಸು. ನಿನ್ನ ಹಸಿವನ್ನು ತೀರಿಸುವುದಕ್ಕಿಂತಲೂ ನನಗೆ ಯಾವುದೂ ಹೆಚ್ಚಲ್ಲ. ನನ್ನ ಮಾತು ಲಾಲಿಸು" ಎಂದು ಪರಿಪರಿ ವಿಧವಾಗಿ ಕೇಳಿಕೊಂಡ ರಾಜ.

"ಹಾಗಾದರೆ ಸರಿ" ಎಂದು ಸಿಂಹ ನಂದಿನಿ ಧೇನುವಿನ ಮೇಲಿಂದ ಕೆಳಗೆ ಧುಮಿಕಿತು. ಕೂಡಲೇ ರಾಜನ ಕೈ ಆತನ ಸ್ವಾಧೀನಕ್ಕೆ ಬಂತು. ಆಡಿತಪ್ಪದ ದಿಲೀಪನು ಸಿಂಹಕ್ಕೆ ಆಹಾರವಾಗಲು ಅದರ ಮುಂದೆ

ಹೋಗಿ ದೇವರನ್ನು ಪ್ರಾರ್ಥಿಸುತ್ತಾ ಕಣ್ಣು ಮುಚ್ಚಿಕೊಂಡು ಕುಳಿತುಕೊಂಡ. ಸಿಂಹವು ತನ್ನಮೇಲೆ ಬೀಳುವುದೆಂದು ಕಾದಿದ್ದ ರಾಜನ ಮೇಲೆ ಅನಿರೀಕ್ಷಿತವಾಗಿ ದೇವಲೋಕದಿಂದ ಪುಷ್ಪವೃಷ್ಟಿ ಆಯಿತು.

ಆ ಭಯಂಕರವಾದ ಸಿಂಹ ಆತನಮೇಲೆ ಬೀಳುವ ಬದಲಾಗಿ "ಕುಮಾರಾ ಏಳು" ಎಂಬ ಸವಿಮಾತುಗಳು ಕೇಳಿಸಿದವು. ರಾಜನು ಕಣ್ಣು ತೆರೆದು ನೋಡಲು ಅಲ್ಲಿ ಸಿಂಹವಿರಲಿಲ್ಲ. 'ಏನಾಯಿತು ಸಿಂಹ? ನನ್ನನ್ನು ಯಾರು ಕರೆದರು?' ಎಂದು ರಾಜನು ವಿಸ್ಮಯದಿಂದ ಕೇಳಲು ನಂದಿನಿಧೇನು "ಯಾರು? ನಾನೇ! ನಿನ್ನನ್ನು ಪರೀಕ್ಷಿಸಲು ಈ ಕಪಟನಾಟಕ ಹೂಡಿದೆ. ಸಿಂಹವೂ ಇಲ್ಲ; ದೇವದಾರು ವೃಕ್ಷವೂ ಇಲ್ಲ. ಎಲ್ಲಾ ಬರೀ ಕಲ್ಪನೆ. ಕುಂಭೋದರನೇ ಅಲ್ಲ, ಬೇರೆ ಯಾರೂ ನನ್ನನ್ನೇನೂ ಮಾಡಲಾರರು.... ನಿನ್ನ ಧರ್ಮಬುದ್ಧಿಗೆ ಮೆಚ್ಚಿದೆ. ನಿನಗೇನು ವರ ಬೇಕೋ ಕೋರಿಕೋ, ಕೊಡುತೇನೆ" ಎಂದಿತು ನಂದಿನಿಧೇನು.

ರಾಜನು ವಿನಯವಾಗಿ "ತಾಯಿ, ನನ್ನ ವಂಶ ಉಳಿಸುವ ಕುಮಾರನು ಬೇಕು" ಎಂದು ಕೋರಿಕೊಂಡನು. ಹಾಗಾದರೆ ತನ್ನ ಕೆಚ್ಚಲಿಂದ ಒಂದು ಬೊಗಸೆ ಹಾಲು ತೆಗೆದುಕೊಂಡು ಕುಡಿಯುವಂತೆ ಹೇಳಿತು ಧೇನು. ಕರುಕುಡಿದ ತರುವಾಯ ಉಳಿದ ಹಾಲನ್ನು ವಸಿಷ್ಠರಿಗೆ ಕೊಟ್ಟು, ಅವರ ಅನುಮತಿಪಡೆದು ತೆಗೆದುಕೊಳ್ಳುವೆನೆಂದು ನುಡಿದ ರಾಜ.

ಈ ಮಾತುಗಳನ್ನು ಕೇಳಿ ಮೆಚ್ಚಿಕೊಂಡು ಆ ಧೇನು ಆಶ್ರಮಕ್ಕೆ ಹಿಂತಿರುಗಿತು. ನಡೆದ ವಿಷಯ ಕೇಳಿ ಸುದಕ್ಷಿಣಾದೇವಿ ಆನಂದಪಟ್ಟಳು. ರಾಜನು ಧೇನುವಿನ ಹಾಲನ್ನು ಕುಡಿದು ಪತ್ನೀಸಮೇತನಾಗಿ ತನ್ನ ಅಯೋಧ್ಯಾ ನಗರಕ್ಕೆ ಹಿಂತಿರುಗಿದನು. ಆ ದಂಪತಿಗಳಿಗೆ ಒಬ್ಬ ಕುಮಾರನು ಜನಿಸಿದನು.

ಆ ಬಾಲಕನೇ ರಘು. ರಘು ದೊಡ್ಡವನಾಗಿ ಸಿಂಹಾಸನವನ್ನೇರಿ ರಾಜಶ್ರೇಷ್ಠನೆಂದು ಎಲ್ಲರಿಂದಲೂ ಹೆಸರು ಪಡೆದನು. ಆತನಿಂದಲೇ ಆ ವಂಶವು ರಘುವಂಶವೆಂದು ಪ್ರಸಿದ್ಧವಾಯಿತು.





# ಶಬ್ದವೇಧಿ

[ವಿಜಯವರ್ಮನು ಕೂಡಲೇ ಬೀಸಲ್ಪೂರು ಪ್ರಭುಗಳ ಪ್ರಶ್ನೆಗೆ ಉತ್ತರ ಹೇಳದೆ ತಡಬಡಿಸಿದ. ಆಗ ಆತನು ಮತ್ತೆ ಅದೇ ಪಶ್ನೆಯನ್ನು ಹಾಕಿದನು—]

“ನನ್ನ ಹೆಸರು ವಿಜಯವರ್ಮ” ಎಂದಷ್ಟು ಮಾತ್ರ ಹೇಳಿದ ವಿಜಯ.

“ನಿಮ್ಮ ವಿಚಾರ ತಿಳಿಯಬೇಕಾದುದು ಇಷ್ಟೇಯೇ?” ಎಂದು ಪ್ರಶ್ನೆಮಾಡಿದರು ಬೀಸಲ್ಪೂರು ಪ್ರಭುಗಳು. ತರುವಾಯ ತಲೆ ದೂಗುತ್ತಾ ಹೀಗೆಂದರು:

“ನೀವು ಯಾವ ಪಕ್ಷಕ್ಕೆ ಸೇರಿದವರು— ಬೀಸಲ್ಪೂರೊ, ಕೋಸಲ್ಪೂರೊ?”

“ನಾನು ಬೀಸಲ್ಪೂರು ಪಕ್ಷದವನು” ಗಂಭೀರ ಸ್ವರದಿಂದ ನುಡಿದ ವಿಜಯ.

“ಈ ಮಾತು ನಂಬಲರ್ಹವಾದುದೇ?” ಎಂದು ಅನುಮಾನ ಸೂಚಿಸುತ್ತಾ ನುಡಿದರು ಬೀಸಲ್ಪೂರು ಪ್ರಭುಗಳು. ಆದರೆ ಮರುಕ್ಷಣದಲ್ಲೇ ನಸುನಗೆ ಬೀರುತ್ತಾ “ನಿಮ್ಮ ಮೇಲೆ ಅನುಮಾನ ಸೂಚಿಸಿದೆನೆಂದು ಏನೂ ಭಾವಿಸಬೇಡಿ. ಇಂದಿನ ಪರಿಸ್ಥಿತಿಯಲ್ಲಿ ಯಾರು, ಯಾವಾಗ, ಹೇಗೆ ಬದಲಾಯಿಸುವರೋ ಹೇಳುವಂತಿಲ್ಲ” ಎಂದರು.

ತನ್ನ ಮಾತನ್ನು ಅನುಮಾನಿಸಿದುದರಿಂದ ವಿಜಯವರ್ಮನಿಗೆ ತುಸ ಕೋಪ ಬಂತು. ಆತನೆಂದ “ನಾನು ಚಂದ್ರದುರ್ಗಾಧಿಪತಿಯನ್ನು ಚೆನ್ನಾಗಿ ಬಲ್ಲೆ. ನನ್ನ ವಿಷಯ ಅವರಿಗೆ ಚೆನ್ನಾಗಿ ತಿಳಿದಿದೆ”

ಚಂದ್ರದುರ್ಗಾಧಿಪತಿಯ ಹೆಸರು ಕಿವಿಗೆ ಬಿದ್ದಕೂಡಲೇ ಬೀಸಲ್ಪೂರು ಪ್ರಭುಗಳ ಮುಖ ಪ್ರಸನ್ನವಾಯಿತು.

“ಸರಿ, ನಿಮ್ಮನ್ನು ಕುರಿತು ನನಗೆ ಮತ್ತೆ ಯಾವ ಸಂಶಯವೂ ಇಲ್ಲ. ಈಗಿರುವ ಸೈನ್ಯ



ವವರಿದ್ದಾರೆ. ಖಂಡಿತ ಬರುವರು" ಎಂದರು ಬೀಸಲ್ಪೂರು ಪ್ರಭುಗಳು.

"ಹಾಗಿದ್ದ ಪಕ್ಷಕ್ಕೆ ನಾವು ದೇವಪುರವನ್ನು ಸಂಪೂರ್ಣವಾಗಿ ಜಯಿಸಲಾರೆವಾದರೂ ಶತ್ರುಗಳನ್ನು ಸದೆಬಡಿಯುಬಹುದು" ಎಂದ ವಿಜಯವರ್ಮ.

"ಹಾಗಾದರೆ ನಿಮ್ಮ ವ್ಯೂಹವೇನು?" ಎಂದು ಕೇಳಿದರು ಬೀಸಲ್ಪೂರು ಪ್ರಭು.

"ನಾವು ಏಷ್ಟು ಹಠಾತ್ತನೆ ದೇವಪುರದ ಮೇಲೆ ಧಾಳಿ ನಡೆಸಿದರೆ ಜಯವು ನಮಗೆ ಅಷ್ಟು ಸುಲಭವಾಗಿ ಲಭಿಸುತ್ತದೆ. ದೇವ ಪುರಕ್ಕೂ, ಈ ಅಡವಿಗೂ ಮಧ್ಯೆ ಇರುವ ಒಂದು ಮೈಲು ಬಯಲು ಪ್ರದೇಶವನ್ನು ಶತ್ರುಗಳಿಗೆ ತಿಳಿಯದಂತೆ ನಾವು ದಾಟಿಬಿಟ್ಟರೆ ಅವರನ್ನು ನಿರಾಯುಧರಾಗಿಯೇ ನುಚ್ಚು ನೂರು ಮಾಡಬಹುದು" ಎಂದ ವಿಜಯ.

"ಸರಿ, ಧಾಳಿಗೆ ಏರ್ಪಾಟುಮಾಡಿ. ಈ ಸುತ್ತಮುತ್ತಲಿನ ಪ್ರದೇಶಗಳನ್ನು ಚೆನ್ನಾಗಿ ಅರಿತಿರುವಿರಾದುದರಿಂದ ನಿಮಗೆ ಈ ಕಾರ್ಯ ವನ್ನು ವಹಿಸುತ್ತಿದ್ದೇನೆ" ಎಂದು ಹೇಳಿ ಬೀಸಲ್ಪೂರು ಪ್ರಭುಗಳು ಗುಡಾರದಿಂದ ಹೊರಕ್ಕೆ ಬಂದರು.

ದಿಂದಲೇ ದೇವಪುರವನ್ನು ಜಯಿಸಬಲ್ಲೆನೆಂದು ನಾನು ತಿಳಿದಿದ್ದೇನೆ. ಆದರೆ ಬಹಳದಿನಗಳಿಂದ ಇತ್ತ ಕಡೆಯೇ ಇರುವಿರಾದುದರಿಂದ ನಿಮ್ಮ ಅಭಿಪ್ರಾಯವನ್ನು ಕೇಳುವೆನು. ಮುಚ್ಚು ಮರೆಯಿಲ್ಲದೆ ಹೇಳಿ"

ಕ್ಷಣಕಾಲ ಆಲೋಚಿಸಿದ ವಿಜಯವರ್ಮ.

"ನಮ್ಮ ಸೈನ್ಯದ ಬಲ ಎಷ್ಟಿರುವುದೋ ತಿಳಿದರೆ ನಾನು ನಿಮಗೆ ಸೂಕ್ತ ಸಲಹೆ ಕೊಡ ಬಲ್ಲೆ" ಎಂದ.

"ನನ್ನ ಸಂಗಡ ಸವಾರರ ದಳ, ಪದಾತಿ ಸೈನ್ಯ ಎಲ್ಲಾ ಸೇರಿ ಸುಮಾರು ಎಂಟುನೂರು ಇರುತ್ತಾರೆ. ಸಾಯಂಕಾಲದ ಸಮಯಕ್ಕೆ ಸುಮಾರು ಸಾವಿರ ಸೈನಿಕರೊಂದಿಗೆ ಚಂದ್ರ ದುರ್ಗಾಧಿಪತಿ ನಮ್ಮ ಸಹಾಯಕ್ಕೆ ಬರು

ವಿಜಯವರ್ಮನ ಆಜ್ಞೆಯಮೇರೆಗೆ ಬೀಸಲ್ಪೂರು ಅಶ್ವದಳ ಮುಂದೆ ಹೊರಟಿತು. ಹಿಂದೆ ಸಾಲುಸಾಲಾಗಿ ಪದಾತಿಸೈನ್ಯ ನಡೆಯುತಿತ್ತು. ವಿಜಯವರ್ಮ ಮತ್ತು ಬೀಸಲ್ಪೂರು ಪ್ರಭುಗಳು ಎರಡು ಉತ್ತಮಾಶ್ವಗಳನ್ನೇರಿ

ಸೈನ್ಯದಮುಂದೆ ಹೊರಟರು. ಸ್ವಲ್ಪಹೊತ್ತಿಗೆಲ್ಲಾ ಆ ಸೈನ್ಯವು ದೇವಪುರದ ಕಡೆಯ ಅಡವಿಯ ಅಂಚಿಗೆ ಬಂದರು.

ಬೀಸಲ್ಪೂರು ಅರಸನೊಂದಿಗೆ ವಿಜಯವರ್ಮನು ಸಮಾಲೋಚನೆ ಮಾಡಿದ. ಮೊದಲು ಅಶ್ವದಳ ಶರವೇಗದಿಂದ ಹೊರಟು ಆ ಬಯಲು ಪ್ರದೇಶವನ್ನು ದಾಟಿ ಸುತ್ತ ಮುತ್ತಲಿರುವ ದೇವಪುರದ ಗಡಿಯನ್ನು ಆಕ್ರಮಿಸಬೇಕು. ಹಿಂದೆ ಇರುವ ಪದಾತಿ ಸೈನ್ಯ ಬಂದು ಸೇರಿದ ತರುವಾಯ ಒಮ್ಮೆಗೇ ಮುನ್ನುಗ್ಗಬಹುದು.

ಬೀಸಲ್ಪೂರು ಅರಸರು ಆಜ್ಞೆಯಿತ್ತರು. ಅಶ್ವದಳವೆಲ್ಲಾ ಅಡವಿಯಿಂದ ಹೊರಬಂದು ಶರವೇಗದಿಂದ ದೇವಪುರದ ಕಡೆ ಓಡಿತು. ಅದೇ ಸಮಯಕ್ಕೆ ದೇವಪುರದಿಂದ ಗಂಟೆಗಳ ನಿನಾದ ಕೇಳಿಬಂತು. ಕೋಟೆಯಲ್ಲಿರುವವರಿಗೆ ಎಚ್ಚರಿಕೆ ಸೂಚಿಸಲು ತಮಟೆ, ನಗಾರಿಗಳು ಭಯಂಕರವಾಗಿ ಮೊಳಗಿದವು.

"ನಮ್ಮ ಬರುವಿಕೆಯನ್ನು ಕಂಡುಕೊಂಡರು. ಆದರೂ ಪರವಾಯಿಲ್ಲ. ಮುಂದೆ ಕಾಣಿಸುವ ಗಡಿ ಪ್ರದೇಶದಲ್ಲಿರುವ ಮನೆಗಳನ್ನು ಆಕ್ರಮಿಸಿಕೊಂಡರೆ ಅವುಗಳನ್ನು ರಕ್ಷಣೆಯ ಸ್ಥಳಗಳನ್ನಾಗಿಟ್ಟುಕೊಂಡು ಶತ್ರುಗಳನ್ನು ತಡೆಯಬಹುದು" ಎಂದನು ವಿಜಯವರ್ಮ.

"ಸೊಗಸಾದ ಆಲೋಚನೆ. ನಾವು ಪಟ್ಟಣವನ್ನು ಆಕ್ರಮಿಸಿಕೊಳ್ಳಲಾರದೆ ಹೋದರೂ ಕಡೇಪಕ್ಷ ಕಾಲಿಟ್ಟರೆ ಸಾಕು.




ಸಾಯಂಕಾಲಕ್ಕೆಲ್ಲಾ ಚಂದ್ರದುರ್ಗಾಧಿಪತಿ ತನ್ನ ಸೈನ್ಯದೊಂದಿಗೆ ಸಹಾಯಕ್ಕೆ ಬರುತ್ತಾನೆ. ಆಗ ಶತ್ರುಸೈನ್ಯವನ್ನು ಸದೆಬಡಿಯಬಹುದು" ಎಂದರು ಬಿಸಲ್ಪೂರು ಪ್ರಭು.

ಬೀಸಲ್ಪೂರು ಅಶ್ವದಳ ದೇವಪುರದ ಗಡಿಯನ್ನು ಸಮೀಪಿಸಿತು. ವಿಜಯವರ್ಮನ ಹಂಚಿಕೆ ಕೊಂಚಮಟ್ಟಿಗೆ ಫಲಿಸಿದಂತೆ ತೋರಿ ಉತ್ಸಾಹವಾಯಿತು.

ಹಠಾತ್ತನೆ ಬಂದ ಧಾಳಿಯನ್ನು ಎದುರಿಸಲು ಭೀಮವರ್ಮನ ಸೈನಿಕರು ಸಿದ್ಧರಿರಲಿಲ್ಲ. ನಾಲ್ಕೈದು ಜನರಂತೆ ಬಂದು ಬೀಸಲ್ಪೂರು ಸೈನ್ಯವನ್ನು ಎದುರಿಸಲು ಪ್ರಯತ್ನಮಾಡಿದರು. ಆದರೆ ಅವರೆಲ್ಲಾ ಬೀಸಲ್ಪೂರು ಪಕ್ಷದವರ ಭರ್ಜಿಗೆ ತುತ್ತಾದರು. ಕೋಟೆಯ



ಒಳಭಾಗದಲ್ಲಿ ನಗಾರಿಗಳ ಸಪ್ಪಳವೂ, ಸೈನಿಕರ ಕೂಗಾಟಗಳ ಕೋಲಾಹಲವೂ ಬಹಳ ಜೋರಾಗಿ ಕೇಳಿದುವು.

ಭೀಮವರ್ಮನು ತನ್ನ ಸೈನಿಕರನ್ನೆಲ್ಲಾ ಪ್ರತಿಧಾಳಿಗಾಗಿ ಒಟ್ಟುಗೂಡಿಸುತ್ತಿರುವಂತೆ ತೋರಿತು. ನಾಲ್ಕು ರಸ್ತೆಗಳು ಸಂಧಿಸುವ ಸ್ಥಳಗಳನ್ನು ಆಕ್ರಮಿಸಿಕೊಂಡು, ವಿಜಯವರ್ಮನು ಸೈನಿಕರನ್ನೂ ರಾಹುತರನ್ನೂ ನಾಲ್ಕು ಭಾಗಗಳಾಗಿ ವಿಂಗಡಿಸಿದನು. ಆ ಭಾಗಗಳನ್ನೂ ನಾಲ್ಕು ರಸ್ತೆಗಳ ಮುಂಭಾಗ ಮತ್ತು ಹಿಂಭಾಗಗಳಲ್ಲಿ ಇಟ್ಟು, ಶತ್ರುವನ್ನು ಪ್ರತಿಭಟಿಸಲು ಯತ್ನಿಸಿದನು.

ಸೈನಿಕರು ರಸ್ತೆಗಳಲ್ಲಿದ್ದ ಮನೆಬಾಗಿಲುಗಳನ್ನು ಒಡೆದು, ಮನೆಯಲ್ಲಿದ್ದ ಸಾಮಾನುಗಳನ್ನೆಲ್ಲಾ ತಂದು ಬೀದಿಯ ಕೊನೆಗಳಲ್ಲಿ ರಾಸಿ ಹಾಕಿದರು. ಕುರ್ಚಿ, ಮಂಚ, ಬಾಗಿಲು ಯಾವುದು ಸಿಕ್ಕಿದರೆ ಅದನ್ನು ತಂದು ಬೀದಿಯ ಕೊನೆಗಳಲ್ಲಿ ಎತ್ತರವಾಗಿ ಸೇರಿಸಿದರು. ಅವುಗಳ ಹಿಂದೆ ಧನುರ್ಬಾಣಗಳನ್ನು ಹಿಡಿದ ಪದಾತಿ ಸೈನ್ಯವೂ, ಅವರಿಗಿಂತಲೂ ಕೊಂಚ ಹಿಂದೆ ಭರ್ಚಿ ಭಲ್ಲೆಗಳನ್ನು ಹಿಡಿದು ಸಿದ್ಧರಾಗಿದ್ದ ರಾಹುತರೂ ನಿಂತರು.

ಕೊಂಚ ಹೊತ್ತಿಗೆಲ್ಲಾ ಭೀಮವರ್ಮ ತನ್ನ ಸೈನ್ಯದೊಂದಿಗೆ ಪ್ರತಿಧಾಳಿ ಪ್ರಾರಂಭಿಸಿದ.

ನಾಲ್ಕು ರಸ್ತೆಗಳು ಕೂಡುವ ಸ್ಥಳದ ಕಡೆಯಿಂದ ದೇವಪುರ ಜಮೀನುದಾರನ ನಾಯಕತ್ವದಲ್ಲಿದ್ದ ಸೈನಿಕರೂ, ಬೀದಿಯ ಕೊನೆಗಳ ಕಡೆಯಿಂದ ಭೀಮವರ್ಮ, ಆತನ ಅನುಚರರ ನಾಯಕತ್ವದಲ್ಲಿದ್ದ ಸೈನಿಕರೂ ಎಡೆಬಿಡದೆ ಬಾಣಗಳ ಮಳೆ ಸುರಿಸಿದರು.

ಅಲ್ಲಿ ಎದುರುಧಾಳಿ ನಡೆಸುತ್ತಿದ್ದಾತನು ಬೀಮವರ್ಮನೆಂದು ವಿಜಯನು ಗ್ರಹಿಸಿದ. ಕವಚವನ್ನು ಧರಿಸಿ, ಕತ್ತಿಯನ್ನು ಝಳಪಿಸುತ್ತಾ ಭೀಮವರ್ಮನು ತನ್ನ ಸೈನಿಕರನ್ನು ಹುರಿದುಂಬಿಸುತ್ತಿದ್ದನು. ವಿಜಯವರ್ಮನು ಆತನ ಕಣ್ಣಿಗೆ ಬಿದ್ದಕೂಡಲೇ,

"ರಾಂಸಿಂಗ್, ಅದೋ ನಮ್ಮ ಕಡು ವೈರಿ ವಿಜಯವರ್ಮ. ಆತನನ್ನು ಈಸಾರಿ ಪ್ರಾಣದೊಂದಿಗೆ ಬಿಡಕೂಡದು. ಜೀವ ಸಹಿತ ಬಂಧಿಸಿದರೂ ಸರಿ, ತಲೆಕಡಿದು ತಂದರೂ ಸರಿ, ಎಲ್ಲಾ ನಿನಗೇ ಬಿಟ್ಟಿದ್ದೇನೆ. ಊಂ,

ಮುಂದಕ್ಕೆ ಸಾಗಿರಿ..." ಭೀಮವರ್ಮನೆಂದ. ರಾಂಸಿಂಗನ ಹೆಸರು ಕೇಳಿ ವಿಜಯ ವರ್ಮನು ನಿಶ್ಚೇಷ್ಟಿತನಾದ.

ಹಿಂದೆ ಅವರಿಬ್ಬರೂ ಗೆಳೆಯರಾಗಿದ್ದರು. ಶಬ್ಧವೇಧಿ ಮುದಿ ಗಂಗುವನ್ನು ಬಾಣದಿಂದ ಕೊಂದಾಗ ಅದಕ್ಕೆ ಕಟ್ಟಿದ್ದ ಪತ್ರದಲ್ಲಿ ರಾಂ ಸಿಂಗನು ಸೋಂನಗರ ಸುಟ್ಟಂತೆ ಬರೆದಿತ್ತು. ಅಂದಿನಿಂದ ಕ್ರಮೇಣ ಅವರು ಪ್ರಬಲ ಶತ್ರು ಗಳಾಗಿ ಪರಿಣಮಿಸಿದರು.

ಏನೇ ಇರಲಿ, ಇಂದಿಗೆ ಸೇಡು ತೀರಿಸಿ ಕೊಳ್ಳುವ ಅವಕಾಶ ಲಭಿಸಿತೆಂದು ವಿಜಯ ವರ್ಮನು ತುಂಬಾ ಉತ್ಸಾಹದಿಂದಿದ್ದ.

ಇಷ್ಟರಲ್ಲಿ ಬೀದಿಗಡ್ಡಲಾಗಿ ಪೇರಿಸಿದ್ದ ಆತಂಕಗಳನ್ನು ಛೇಧಿಸಿ ರಾಂಸಿಂಗನು ಒಂದು ಕಡೆಯಿಂದ ಒಳನುಗ್ಗಿದ. ರಾಂಸಿಂಗನೊಂದಿಗೆ ಯುದ್ಧಮಾಡಲು ಕಾತುರನಾಗಿದ್ದ ವಿಜಯ ವರ್ಮನು ಮುಂದಕ್ಕೆ ಹಾರಿ ಆತನೊಂದಿಗೆ ಕತ್ತಿಯುದ್ಧಕ್ಕೆ ನಿಂತ.

ವಿಜಯಲಕ್ಷ್ಮಿ ಯಾರನ್ನು ವರಿಸುವಳೆಂದು ಕೆಲವಾರು ನಿಮಿಷ ಹೋರಾಟ ನಡೆಯುವಷ್ಟ ರಲ್ಲಿ ತಿಳಿದುಬಿಟ್ಟಿತು. ಆಯಾಸಗೊಂಡ ರಾಂ ಸಿಂಗನು ಒಂದೊಂದು ಹೆಜ್ಜೆ ಹಿಂದಿಡುತ್ತಾ ತನ್ನ ಸೈನ್ಯವಿರುವಕಡೆ ಹೋಗಲು ಪ್ರಾರಂಭಿ ಸಿದನು. ಆಗ ಅಪರಿಮಿತ ಉತ್ಸಾಹದಿಂದ ಪೌರುಷದಿಂದ ವಿಜಯವರ್ಮನು ಬಿರುಸಾಗಿ ಕತ್ತಿಯನ್ನು ಬೀಸುತ್ತಿದ್ದ. ಕಾಳಗ ಕಡಿವಾ ಯಿತು. ಬೀದಿಗಡ್ಡಲಾಗಿ ಹಾಕಿದ್ದರಕ್ಷಣೆಗಳನ್ನು




ಸಮಿಾಪಿಸಲು, ಚಲ್ಲಾಪಿಲ್ಲಿಯಾಗಿದ್ದ ಮಂಚ ಗಳೂ, ಕುರ್ಚಿಗಳೂ ಕಾದಾಡುತ್ತಿರುವವರ ಕಾಲುಗಳಿಗೆ ತಗಲುತ್ತಿದ್ದವು. ಆಗೊಮ್ಮೆ ಈಗೊಮ್ಮೆ ಕಾಲುಜಾರಿ ಬೀಳುತ್ತಿದ್ದರು.

ರಾಂಸಿಂಗನು ಹಾಗೊಮ್ಮೆ ಕಾಲುಜಾರಿ ಬೀಳುವುದೂ, ವಿಜಯವರ್ಮನ ಖಡ್ಗ ಮಿಂಚು ಹೊಡೆದಂತೆ ಆತನ ಶಿರವನ್ನು ಛೇದಿ ಸುವುದೂ ಕ್ಷಣಮಾತ್ರದಲ್ಲಿ ನಡೆದುಬಿಟ್ಟಿತು. ಸೈನಿಕರಲ್ಲಿ ಬಹಳ ಕೋಲಾಹಲವಾಯಿತು.

ಈ ದೃಶ್ಯವನ್ನು ಕಂಡು ಬೀಸಲ್ಪೂರು ಸೈನ್ಯ ಜಯಜಯಕಾರ ಮಾಡಿದರು. ಭೀಮ ವರ್ಮನ ಸೈನಿಕರು ಭೀತಿಯಿಂದ ಹಿಂದಕ್ಕೆ ಓಡತೊಡಗಿದರು. ಭೀಮವರ್ಮನ ಆಜ್ಞೆಗಳಿ ಗಾಗಲೀ, ಹುರುಪಿನ ಮಾತುಗಳಿಗಾಗಲೀ




ಬೆನ್ನು ತೋರಿಸಿ ಓಡುತ್ತಿದ್ದ ಸೈನಿಕರನ್ನು ನಿಲ್ಲಿಸಿ ಮತ್ತೆ ಯುದ್ಧ ಮಾಡಿಸುವ ಶಕ್ತಿಸ್ವಲ್ಪವೂ ಇಲ್ಲದಾಯಿತು. ಎಲ್ಲರೂ ಓಡುವವರೇ.

"ನಿನ್ನ ಸಾಹಸ ಕಂಡು ತುಂಬಾ ಸಂತೋಷವಾಗಿದೆ. ಭೀಮವರ್ಮನ ಸೈನಿಕರು ಭೀತಿಯಿಂದ ಓಡುತ್ತಿದ್ದಾರೆ. ಈಗ ನಾವು ನರ್ಮದಾ ತೀರದಲ್ಲಿರುವ ಅವರ ಮುಖ್ಯ ಭವನವನ್ನು ಸಹ ಮುತ್ತಿದರೆ ಜಯಶೀಲರಾಗಬಹುದೆಂದು ತೋರುತ್ತಿದೆ. ನಿಮ್ಮ ಅಭಿಪ್ರಾಯವೇನು?" ಎಂದು ಚೀಸಲ್ಪೂರು ಅರಸರು ಕೇಳಿದರು.

ವಿಜಯವರ್ಮನು ಕೂಡಲೇ ಈ ಸಲಹೆಯನ್ನು ಅಂಗೀಕರಿಸಿದನು. ನರ್ಮದಾನದಿ ತೀರದಲ್ಲಿರುವ ಭವನದಲ್ಲಿ ಕರುಣ ಬಂಧಿತಳಾಗಿದ್ದಾಳೆ. ಆಕೆಯನ್ನು ಆದಷ್ಟು ಬೇಗ ವಿಮುಕ್ತಳನ್ನಾಗಿ ಮಾಡುವುದು ಉತ್ತಮ ಎಂದು ವಿಜಯವರ್ಮನು ಯೋಚಿಸಿದ.

ಆ ಭವನವನ್ನು ಹಿಡಿಯಲು ಭಾರಿ ಹೋರಾಟ ನಡೆಯಬಹುದೆಂದು ಎಣಿಸಿದ್ದ ವಿಜಯನಿಗೆ ನಿರಾಶೆ ಆಯಿತು!

ಭವನದ ಮುಖ್ಯದ್ವಾರದ ಹತ್ತಿರ ಎದುರು ಬಿದ್ದ ಕೆಲವು ಸೈನಿಕರನ್ನೂ, ಒಳಗಡೆ ತಮ್ಮನ್ನು ಎದುರಿಸಿದ ಕೆಲವು ಜನರನ್ನೂ ಕ್ಷಣಮಾತ್ರದಲ್ಲಿ ಕೊಂದುಹಾಕಿದರು ವಿಜಯವರ್ಮನ ಪರಿವಾರ. ವಿಜಯನು ವೇಗವಾಗಿ ಒಳನುಗ್ಗಿ ತನ್ನ ಸೈನಿಕರ ಸಹಾಯದಿಂದ ಕರುಣಳಿಗಾಗಿ ಪ್ರತಿ ಕೋಣೆಯಲ್ಲೂ ಹುಡುಕಿದ. ಆದರೆ ಕರುಣ ಕಾಣಿಸಲಿಲ್ಲ.

ನಿರಾಶೆಯಿಂದ ಆತನು ಭವನದ ಮೆಟ್ಟಲುಗಳನ್ನು ಇಳಿದು ಬರುತ್ತಿರುವಾಗ ಆತನಿಗೊಂದು ಯೋಚನೆ ಹೊಳೆಯಿತು. ಸರಸರನೆಂದು ತುದಿಯ ಮೆಟ್ಟಲುವರೆವಿಗೂ ಏರಿ, ಒಂದು ಮೂಲೆಯಲ್ಲಿದ್ದ ಬುರುಜುನಿಂದ ಅಡವಿಯ ಕಡೆ ನೋಡಿದ.

ನಲವತ್ತು–ಐವತ್ತು ಸವಾರರು, ಕೊಂಚ ಕಾಲ್ಬಲ ಅಡವಿಯ ಕಡೆ ನಾಗಾಲೋಟದಿಂದ ಓಡುತ್ತಿರುವುದು ಕಾಣಿಸಿತು. ಅವರು ಭೀಮವರ್ಮನ ಕಡೆಯವರೇ ಇರಬೇಕೆಂತಲೂ, ಕರುಣಳನ್ನು ಬಂಧಿಸಿ ಕರೆದುಕೊಂಡು ಹೋಗುತ್ತಿರಬಹುದೆಂದೂ ವಿಜಯವರ್ಮನು ಗ್ರಹಿಸಿದ. ತತ್‌ಕ್ಷಣ ತನ್ನ ಸೈನಿಕರನ್ನು





ಕರೆದುಕೊಂಡು ಅವರನ್ನು ಬೆನ್ನಟ್ಟಿದ. ತುಸ ಹೊತ್ತಿಗೆಲ್ಲಾ ಅವರೂ ಅಡವಿಯನ್ನು ಸಮೀಪಿಸಿದರು. ವಿಜಯವರ್ಮನು ತನ್ನ ಸೈನಿಕರಿಗೆ ಸಲಹೆಗಳನ್ನು ಕೊಟ್ಟು ಅವರೊಂದಿಗೆ ಒಳಗೆ ನುಗ್ಗಿದನು. ಮರುಕ್ಷಣವೇ ಸನಿಯದಯಲ್ಲೇ ಭಾರಿ ಕಾಳಗವಾಗುತ್ತಿರುವ ಕೋಲಾಹಲದ ಶಬ್ದವು ಆತನಿಗೆ ಕೇಳಿಸಿತು.

ಈ ಗಲಭೆ ಅಡವಿಯಲ್ಲಿದ್ದ ದೇವಾಲಯ ಪ್ರದೇಶದಿಂದ ಬರುತ್ತಿರುವಂತೆ ವಿಜಯನು ಗ್ರಹಿಸಿದ. ಸೈನಿಕರನ್ನು ಅತ್ತ ಕಡೆ ಹೋಗುವಂತೆ ಆಜ್ಞಾಪಿಸುತ್ತಿರಲಾಗಿ, ಇದ್ದಕ್ಕಿದ್ದಹಾಗೆ ಒಂದು ಮರದ ಮೇಲಿಂದ ಅಂಬಿಗ ಅಣ್ಣಯ್ಯದಘಾರನೆ ಕೆಳಗೆ ಧುಮಿಕಿದ.

"ವಿಜಯ, ಇದೇ ನಮಗೆ ಸಮಯ. ಭೀಮವರ್ಮನೊಂದಿಗೆ ಚಂಡಿದಾಸನು ಸ್ವತಃ ಹೋರಾಟಕ್ಕೆ ನಿಂತಿದ್ದಾನೆ. ತಡಮಾಡಬಾರದು ನಡೆ ಬೇಗ" ಎಂದ.

ವಿಜಯವರ್ಮನು ಆ ಪ್ರದೇಶಕ್ಕೆ ಹೋಗುವಷ್ಟರಲ್ಲಿ ಯುದ್ಧ ಮುಗಿದುಹೋಗಿತ್ತು. ಚಂಡಿದಾಸನು ಓಡಿಹೋಗುತ್ತಿದ್ದ ಭೀಮವರ್ಮನ ಪರಿವಾರದವರನ್ನು ಸದೆಬಡಿಯಲು ತನ್ನ ಅನುಚರನ್ನು ಹುರಿದುಂಬಿಸುತ್ತಿದ್ದಾನೆ. ಚಂಡಿದಾಸನನ್ನು ಕಂಡಕೂಡಲೇ ವಿಜಯವರ್ಮನು ಆತುರದಿಂದ—

"ಕರುಣ ಎಲ್ಲಿ? ಭೀಮವರ್ಮ ಸೋಮಶರ್ಮರು ಓಡಿಹೋದರೆ?" ಎಂದು ದುಗುಡದಿಂದ ಕೇಳಿದ. ಅದಕ್ಕೆ ಚಂಡಿದಾಸನು ನಗುತ್ತಾ "ಕರುಣ ಇಲ್ಲೇ ಇರುವಳು. ಭೀಮವರ್ಮ ಸೋಮಶರ್ಮರು ತಮ್ಮ ಮಕ್ಕಳನ್ನು ನೆನೆಸುತ್ತಾ ಪ್ರಾಣಗಳನ್ನು ತ್ಯಜಿಸಿದರು! ಕತ್ತಿಯ ಏಟಿಗೆ ಬಲಿಯಾದ ಭೀಮವರ್ಮ, ಬಾಣದ ಹೊಡೆತಕ್ಕೆ ಗುರಿಯಾದ ಸೋಮಶರ್ಮ ಇಲ್ಲೇ ಇದ್ದಾರೆ. ಆದರೆ ಸೋಂನಗರವನ್ನು ಅಗ್ನಿಗರ್ಪಿಸಿದ ದುರುಳ ರಾಂಸಿಂಗ್ ತಪ್ಪಿಸಿಕೊಂಡ" ಎಂದ.

"ರಾಂಸಿಂಗ್ ತಪ್ಪಿಸಿಕೊಳ್ಳಲಿಲ್ಲ. ಈಮೊದಲೇ ನಾನು ಅವನ ಕಥೆ ಮುಗಿಸಿದೆ" ಎಂದ ವಿಜಯ. ಈ ಮಾತುಗಳನ್ನು ಕೇಳಿ ಚಂಡಿದಾಸನು ಪರಮಾನಂದಗೊಂಡ.

"ಹಾಗೆಂದರೆ ಶತ್ರುಶೇಷವಿಲ್ಲವೆಂದಾಯಿತು. ನಿನ್ನ ತಂದೆ ಅಭಯವರ್ಮನನ್ನು





ಚಿತ್ರಹಿಂಸೆಗೆ ಗುರಿಮಾಡಿ ಸಾಯಿಸಿದ ಹಂತಕರಿಗೆ ತಕ್ಕ ಶಾಸ್ತಿ ನಡೆಯಿತು. ನನ್ನ ಕೋರಿಕೆ ನೆರವೇರಿತು. ಇನ್ನು ಉಳಿದಿರುವುದೆಂದರೆ ಕರುಣಳೊಂದಿಗೆ ನಿನ್ನ ವಿವಾಹ. ಅದು ಈ ದೇವಾಲಯದಲ್ಲೇ ನಡೆಯಲಿ."

ಅಲ್ಲೇ ಆ ನಿಮಿಷವೇ ಕರುಣಳೊಂದಿಗೆ ವಿಜಯವರ್ಮನ ವಿವಾಹವಾಯಿತು. ಆಯುಧಗಳನ್ನು ಧರಿಸಿದ್ದ ಚಂಡಿದಾಸನ ಅನುಚರರು ಮತ್ತು ಮದುವೆಯ ಮುಖಂಡರು ಅತಿಥಿಗಳಾದರು!

ಎಲ್ಲರ ಮುಖಗಳಲ್ಲೂ ಆನಂದ ತುಳುಕಾಡುತಿತ್ತು. ಚಂಡಿದಾಸನು ಹೀಗೆಂದ:

"ಇನ್ನು ನಾವು ಸೋಂನಗರಕ್ಕೆ ಹೊರಡೋಣ. ಆ ಪ್ರಾಂತ್ಯವೆಲ್ಲಾ ನಿನ್ನ ತಂದೆಯವರದಾಗಿತ್ತು. ಸೋಮಶರ್ಮನಿಂದ ಸರ್ವನಾಶ ಮಾಡಲ್ಪಟ್ಟ ಆ ನಗರವನ್ನು ಮತ್ತೆ ಕಟ್ಟೋಣ. ಇನ್ನು ನಮ್ಮ ಬಾಳನ್ನು ಶಾಂತವಾಗಿ ಕಳೆಯೋಣ."

"ಹಾಗಾದರೆ ನಾವು ಚಂದ್ರದುರ್ಗಾಧಿಪತಿಯನ್ನು ಭೇಟಿಮಾಡುವುದು ಯಾವಾಗ? ಅವರು ಕರುಣಳ ಸಾಕು ತಂದೆಯಷ್ಟೆ" ಎಂದ ವಿಜಯವರ್ಮ. ಕೌತುಕವಿತ್ತು ಆ ಮಾತುಗಳಲ್ಲಿ.

"ಚಂದ್ರದುರ್ಗಾಧಿಪತಿಯನ್ನು ಭೇಟಿಮಾಡೋಣ. ವಿವಾಹ ವಿಷಯ ನಾನು ಅವರಿಗೆ ತಿಳಿಸುವ ಏರ್ಪಾಟು ಮಾಡುತ್ತೇನೆ. ಮೊದಲು ಸೋಂನಗರಕ್ಕೆ ಹೊರಡಬೇಕು".

"ಹಾಗಾದರೆ ನಾನೂ ಸೋಂನಗರಕ್ಕೆ ಬರುತ್ತೇನೆ. ನನ್ನ ರಹಸ್ಯ ಗೃಹವನ್ನು ತ್ಯಜಿಸುವೆನು" ಎಂದ ಅಂಬಿಗ ಅಣ್ಣಯ್ಯ.

ಅಣ್ಣಯ್ಯನ ಮಾತುಗಳನ್ನು ಕೇಳಿ ಎಲ್ಲರೂ ಗೊಳ್ಳೆಂದು ನಕ್ಕರು. ವಿಜಯವರ್ಮ ಕರುಣರ ಎರಡು ಮಗ್ಗುಲಲ್ಲೂ ಚಂಡೀದಾಸ ಅಣ್ಣಯ್ಯರೂ, ಅವರ ಹಿಂದೆ ಜಯಕಾರ ಮಾಡುತ್ತಿದ್ದ ಸೈನಿಕರೂ ಸೋಂನಗರದ ಕಡೆಗೆ ನಡೆದರು. ['ಶಬ್ದವೇಧಿ' ಮುಗಿಯಿತು]






ಒಂದು ಊರಿನಲ್ಲಿ ಕೋದಂಡಪಾಣಿಯೆಂಬೊಬ್ಬ ವ್ಯಾಪಾರಿ ಇದ್ದ. ಅವನು ದಿನಾ ರಾತ್ರಿ ಅಂಗಡಿ ಬಾಗಿಲು ಹಾಕಿ ವ್ಯಾಪಾರದಲ್ಲಿ ಬಂದ ದುಡ್ಡನ್ನು ಮನೆಗೆ ತಂದು, ಕೋಣೆಯಲ್ಲಿ ಸುರಿಯುವನು; ಲೆಕ್ಕಮಾಡಿ ರೂಪಾಯಿ ಚಿಲ್ಲರೆಗಳನ್ನು ಬೇರೆ ಬೇರೆ ಚೀಲದಲ್ಲಿ ಗಂಟುಕಟ್ಟಿಡುವನು.

ಒಂದು ದಿನ ರಾತ್ರಿ ಅವನು ಹಾಗೆ ದುಡ್ಡು ಎಣಿಸುತ್ತಿರುವಾಗ, ಅವನ ಗುರುತಿನ ಗುರುವಯ್ಯನೆಂಬವನು ಬಂದ. ಅವನು ನೇರಾಗಿ ಕೋದಂಡಪಾಣಿ ಹಣವೆಣಿಸುತ್ತಿರುವ ಕೋಣೆಗೇ ಬಂದು ಅವನ ಬಳಿಯಲ್ಲೇ ಕುಳಿತ. "ಏನು ಬಂದಿರಿ ಗುರುವಯ್ಯಾ? ಏನು ಬೇಕಾಗಿತ್ತು?" ಎಂದು ಬೇಸರವಿದ್ದರೂ ತೋರಿಸಿಕೊಳ್ಳದೆ ವಿಚಾರಿಸಿದ ಕೋದಂಡಪಾಣಿ.

"ಮತ್ತೇನಿಲ್ಲ. ನಾನು ಬಹಳ ಕಷ್ಟಕ್ಕೆ ಸಿಕ್ಕಿಬಿದ್ದಿದ್ದೇನೆ. ನನಗೊಂದು ಐವತ್ತು ರೂಪಾಯಿ ಸಾಲಬೇಕಾಗಿತ್ತು. ಬಡ್ಡಿ ಹೇಗಾದರೂ ಚಿಂತೆಯಿಲ್ಲ. ನೀವೇ ಈ ಉಪಕಾರ ಮಾಡಬೇಕು" ಎಂದ ಗುರುವಯ್ಯ.

"ಇಲ್ಲವಲ್ಲಾ. ನಾನೇ ಬಹಳ ಸಿಕ್ಕಿಬಿದ್ದಿದ್ದೇನೆ. ಸಾಲವೆಲ್ಲಿಂದ ಕೊಡಲಿ? ವ್ಯಾಪಾರ ತುಂಬ ಡಲ್ಲಾಗಿದೆ. ಸರಕು ತರಲಿಕ್ಕೂ ಗಿಟ್ಟಿಬರುವುದಿಲ್ಲ" ಎಂದು ಕೋದಂಡಪಾಣಿ ತನ ವ್ಯಾಪಾರ ವಹಿವಾಟಿನ ಕಷ್ಟನಷ್ಟಗಳನು ಕುರಿತು ಉದ್ದಕ್ಕೆ ಹೇಳಲಾರಂಭಿಸಿದ.

ಅಷ್ಟರಲ್ಲಿ ಇದ್ದಕ್ಕಿದ್ದ ಹಾಗೆ ಏನೋ ಕೋಳಾರು ಬಂದು ಎಲೆಕ್ಟ್ರಿಕ್ ಲೈಟು ಆರಿಹೋಯಿತು. ಕತ್ತಲೆ ಕವಿಯಿತು. ಕೂಡಲೇ ಕೋದಂಡಪಾಣಿ ಗುರುವಯ್ಯನ ಎರಡು ಕೈಗಳನ್ನೂ ಹಿಡಿದುಕೊಂಡನು. "ಏನು ಏಕೆ?" ಎಂದ ಗುರುವಯ್ಯ. "ಪರ್ವಾಯಿಲ್ಲ. ಇಲ್ಲಾ ಅಂದೇಂತ ಕೋಪಿಸಿಕೊಳ್ಳಬೇಡಿ" ಎಂದ ಕೋದಂಡಪಾಣಿ.

"ಅಯ್ಯೋ ಕೋಪವೇನು ಬಂತು. ಅದೇನಿಲ್ಲ ಅದೇನಿಲ್ಲ" ಎಂದು ಗುರುವಯ್ಯ ಕೈ

ಎಂ. ಯಚ್. ಶಂಕರನಾರಾಯಣ, ಬೆಂಗಳೂರು

ಬಿಡಿಸಿಕೊಳ್ಳಲು ನೋಡಿದ. ಕೋದಂಡಪಾಣಿ "ಲಾಂದ್ರ ಹಚ್ಚಿತಾ" ಎಂದು ಹೆಂಡತಿಗೆ ಕೂಗಿ ಹೇಳಿ—"ಅಲ್ಲಾ ಗುರುವಯ್ಯ. ರಾತ್ರಿ ಇಷ್ಟೊತ್ತಿಗೆ ಬಂದಿದ್ದೀರಿ. ಊಟಮಾಡಿಸಿ ಕೊಂಡೇ ಹೋಗಬೇಕು" ಎಂದ ಕೈಗಳನ್ನು ಬಿಗಿಯಾಗಿ ಹಿಡಿದುಕೊಂಡೇ.

"ಇಲ್ಲಾ ನಾನು ಉಂಡೇ ಬಂದದ್ದು" ಎಂದ ಗುರುವಯ್ಯ. "ಆದರೂ ಚಿಂತಿಲ್ಲ. ಸ್ವಲ್ಪಾದರೂ ಇಲ್ಲಿ ಉಣ್ಣೋಣವಂತೆ. ಏಳಿ, ಬನ್ನಿ" ಎನ್ನುತ್ತಾ ಗುರುವಯ್ಯನನ್ನು ಆಚೆಗೆ ಕರೆದೊಯ್ಯಲು ನೋಡಿದ.

"ಬೇಡ ಬೇಡ" ಎಂದು ಗುರುವಯ್ಯ ಹೇಳಿದರೂ ಕೋದಂಡಪಾಣಿ ಅವನ ಕೈಯನ್ನು ಬಿಡದೆ ತುಂಬಾ ಉಪಚಾರಮಾಡಿದ. ಅಷ್ಟ ರಲ್ಲಿ ಫಳಕ್ಕನೆ ದೀಪ ಬಂತು.

ಕೂಡಲೇ ಕೋದಂಡಪಾಣಿ ಗುರುವಯ್ಯ ನನ್ನೂ ಹಣದರಾಶಿಯನ್ನೂ ನೋಡಿ—" ಸರಿ. ನಮ್ಮಂಥ ಬಡವರ ಮನೆಯಲ್ಲಿ ಉಣ್ಣುವಿರಾ ನೀವು. ಹೋಗಿರಪ್ಪ" ಎಂದು ಕೈಬಿಟ್ಟ. "ಸಿಟ್ಟುಮಾಡಬೇಡಿ ಸ್ವಾಮಿ. ನಿಮ್ಮಂಥ ದೊಡ್ಡವರು ಇಷ್ಟು ಉಪಚಾರ ಮಾಡುವಾಗ ನಾನು ಉಣ್ಣದೆ ಹೋಗುವುದು ಸರಿಯಲ್ಲ" ಎಂದು ಗುರುವಯ್ಯ ಅಲ್ಲಿಯೇ ಕುಳಿತ.

"ಓಹೊ! ಇಷ್ಟು ಉಪಚಾರ ಮಾಡ ಬೇಕೇನು? ಏನೂ ಬೇಡವಯ್ಯ. ಹೋಗಿ ನಾನು ಉಪಚಾರ ಮಾಡೋದೂ ಇಲ್ಲ, ಮಾಡಿದ್ದೂ ಇಲ್ಲ. ನೀವು ಇಲ್ಲಿ ಇರುವುದೂ ಬೇಡ. ಹೋಗಿಬೇಗ" ಎಂದು ಹುಬ್ಬು ಗಂಟು ಹಾಕಿದ ಕೋದಂಡಪಾಣಿ.

"ಯಾರು ನಿಮ್ಮನ್ನು ಉಪಚಾರ ಮಾಡೆಂದರೋ!" ಎಂದು ಗೊಣಗಿ ಕೊಳ್ಳುತ್ತಾ ತೆಪ್ಪನೆ ಹೊರಟು ಹೋದ ಗುರುವಯ್ಯ.

ನಂತರ ಕೋದಂಡಪಾಣಿ ಹಣ ಎಣಿಸು ತ್ತಿರುವಾಗ ಅವನ ಹೆಂಡತಿ ಬಂದು—"ಏನು ಗಡಿಬಿಡಿ? ಲಾಂದ್ರದಲ್ಲಿ ಎಣ್ಣೆಯೇ ಇಲ್ಲ" ಎಂದು ವಿಚಾರಿಸಿದಳು.

"ಕತ್ತಲೆಯಲ್ಲಿ ಅವನೆಲ್ಲಿ ಹಣ ಬಾಚಿ ಕೊಳ್ಳುವನೋ ಎಂದು ದೀಪ ಬರುವವರೆಗೂ ಏನೇನೋ ನೆಪ ಹೇಳುತ್ತಾ ಅವನ ಕೈಹಿಡಿದೆ. ಅಷ್ಟೇ" ಎಂದ ಕೋದಂಡಪಾಣಿ.






# ಕುಬೇರನಕೊಳ

ಹಿಂದೆ ದೇವದತ್ತನು ಕಾಶೀರಾಜ್ಯವನ್ನು ಆಳುತ್ತಿದ್ದಾಗ ಬೋಧಿಸತ್ವನು ಆತನ ಮಗನಾಗಿ ಜನಿಸಿದನು. ಆ ಮಗುವಿಗೆ 'ಮಹಾಶಾಸನ'ನೆಂಬ ಹೆಸರಿಟ್ಟು ಅತ್ಯಂತ ಮಮತೆಯಿಂದ ಸಾಕುತ್ತಿದ್ದರು. ಮತ್ತೆ ಕೆಲವು ವರ್ಷಗಳಾದ ನಂತರ ದೇವದತ್ತರಾಜನಿಗೆ ಮತ್ತೊಬ್ಬ ಮಗ ಹುಟ್ಟಿದ. ಆ ಶಿಶುವಿಗೆ ಸೋಮದತ್ತನೆಂದು ನಾಮಕರಣಮಾಡಿ ಅತಿ ಪ್ರೀತಿಯಿಂದ ಸಲಹುತ್ತಿದ್ದರು.

ಈ ಮಕ್ಕಳು ಹುಟ್ಟಿದ ಕೆಲವು ವರ್ಷಗಳ ನಂತರ ರಾಣಿ ಮರಣ ಹೊಂದಿದಳು. ಆದುದರಿಂದ ದೇವದತ್ತನು ಬೇರೊಬ್ಬ ರಾಜಕುಮಾರಿಯನ್ನು ಮದುವೆಯಾದ. ಮೋಹದ ಮಡದಿಯಾದ ಆಕೆಗೂ ಒಬ್ಬ ಪುತ್ರನು ಜನಿಸಿದ.

ಕಿರಿಯ ರಾಣಿಗೆ ಪುತ್ರನು ಜನಿಸಿದ ಸುದ್ದಿ ಕೇಳಿ ರಾಜನು ಉಬ್ಬಿಹೋದ. ಸಂತೋಷಾತಿಶಯದಿಂದ ಹೆಂಡತಿಯೊಂದಿಗೆ "ಮಗನಿಗೆ ಸಂಬಂಧಪಟ್ಟ ಯಾವುದಾದರೂ ವರವನ್ನು ಕೋರಿಕೋ" ಎಂದು ಹೇಳಿದ. ಅದಕ್ಕೆ ಆಕೆ "ಈಗೇನೂ ಅಗತ್ಯವಿಲ್ಲ. ಸಮಯ ಬಂದಾಗ ನಾನೇ ಕೇಳುವೆನು" ಎಂದಳು. "ಸರಿ, ನಿನ್ನ ಇಷ್ಟ" ಎಂದ ರಾಜ.

ಕಿರಿಯ ರಾಣಿಯ ಮಗನಿಗೆ ಆದಿತ್ಯನೆಂದು ಹೆಸರಿಟ್ಟರು. ಆದಿತ್ಯನು ದಿನೇದಿನೇ ಪ್ರವರ್ಧಮಾನನಾಗಿ ರಾಜರಿಗೆ ಉಚಿತವಾದ ವಿದ್ಯೆಗಳೆಲ್ಲವನ್ನೂ ಕಲಿತು, ಪ್ರವೀಣನಾಗಿ ಕ್ರಮೇಣ ಯೌವನವಂತನಾದ.

ಒಂದುದಿನ ಕಿರಿಯ ರಾಣಿ ರಾಜನ ಹತ್ತಿರಕ್ಕೆ ಬಂದು "ಅಂದು ನೀವು ನನಗೆ ಕೊಟ್ಟ ವರವನ್ನು ಈಗ ಈಡೇರಿಸಬೇಕು. ನನ್ನ ಮಗನಾದ ಆದಿತ್ಯನನ್ನು ಯುವರಾಜನನ್ನಾಗಿ ಮಾಡಬೇಕು; ಇದೇ ನನ್ನ ಕೋರಿಕೆ" ಎಂದು ಕೇಳಿಕೊಂಡಳು.

ಈ ಮಾತು ಕೇಳಿ ರಾಜನು ಸ್ತಂಭಿತನಾದ. "ಏನಿದು, ಅರ್ಥಪರ್ಥವಿಲ್ಲದ ಕೋರಿಕೆ. ಪಟ್ಟದರಸಿಯ ಹಿರಿಯ ಮಕ್ಕಳು ಜೀವಿಸಿರುವಾಗ ಆದಿತ್ಯನಿಗೆ ಯುವರಾಜ ಪದವಿ ಕೊಡುವುದೆಂತು? ಇಂತಹ ಅನ್ಯಾಯದ ಕೆಲ

ಯಜ್. ನಾರಾಯಣರಾವ್

ಸಕ್ಕೆ ನಾನು ಕೈಹಾಕಿದರೆ ಜನ ನನ್ನನ್ನು ನಿಂದಿಸುವುದಿಲ್ಲವೇ? ಅಪವಾದಕ್ಕೆ ಹೆದರ ಬೇಡವೇ? ಈ ನಿನ್ನ ಕೋರಿಕೆ ಸರಿಯಾದು ದಲ್ಲ. ಇದು ನಡೆಯಬಾರದು" ಎಂದು ಖಚಿತವಾಗಿ ನುಡಿದ.

ಈ ರೀತಿ ರಾಜನು ತನ್ನ ಮಾತನ್ನು ನಿರಾಕರಿಸಿದರೂ ಕಿರಿಯರಾಣಿ ಧೃತಿಗೆಡಲಿಲ್ಲ; ತನ್ನ ಧೋರಣೆ ಬಿಡಲಿಲ್ಲ. ಆಗಾಗ ಗಂಡನನ್ನು ಪೀಡಿಸಿ ನಿರ್ಬಂಧಪಡಿಸುತ್ತಿದ್ದಳು.

ರಾಜನಿಗೆ ಬೇಸರವಾಯಿತು. 'ಕಿರಿಯ ರಾಣಿಯದು ಹಠಮಾರಿಗುಣ. ತಾನೋ ಆಕೆಯ ಮಾತಿಗೆ ಎದುರಾಡಲಾರ. ತನ್ನ ಮಗನ ಮೇಲಿನ ಮೋಹದಿಂದ ಆಕೆ ಹಿರಿಯ ಮಕ್ಕಳಿಬ್ಬರಿಗೂ ಹಾನಿಮಾಡಿದರೂ ಮಾಡಬಹುದು. ಇದು ಸಹಜ' ಎಂದು ಯೋಚಿಸಿ, ಒಂದು ದಿನ ತನ್ನ ಹಿರಿಯಮಕ್ಕಳಿಬ್ಬರನ್ನೂ ಕರೆದು ಸಮಸ್ತ ವಿಷಯವನ್ನೂ ಅವರಿಗೆ ತಿಳಿಸಿದ. ಕೊನೆಗೆ ಆತನು,

"ಮಕ್ಕಳೇ, ನಿಮಗೆ ತೊಂದರೆಯುಂಟಾಗಬಹುದೆಂದು ನನಗೆ ಭಯವಾಗುತ್ತಿದೆ. ಆದುದರಿಂದ ನೀವು ಈಗಲೇ ಅಡವಿಗೆ ಹೋಗಿ ಹೇಗೋ ಒಂದು ರೀತಿ ಜೀವಿಸಿಕೊಂಡಿರಿ. ನನ್ನ ಅನಂತರ ರಾಜ್ಯ ನಿಮಗೇ ಲಭಿಸುವುದು. ಆಗ ಇಲ್ಲಿಗೆ ಬಂದು ನೀವು ರಾಜ್ಯವನ್ನು ಪರಿಪಾಲಿಸಬಹುದು" ಎಂದ.

ಈ ಹಿತವಚನವನ್ನು ಕೇಳಿ ತಂದೆಯ ಆಜ್ಞೆಯನ್ನು ಪಾಲಿಸಲು ಮಹಾಶಾಸನನೂ ಸೋಮದತ್ತನೂ ಕೂಡಲೇ ಕಾಡಿಗೆ ಹೋದರು. ಇವರಿಬ್ಬರೂ ಹೋಗುವುದನ್ನು ಕಂಡು, ಆದಿತ್ಯನೂ ಹಟಹಿಡಿದು ಅವರ ಬೆನ್ನು ಹಿಂದೆ ಬಿದ್ದ. ಸಹೋದರು ಮೂವರೂ ಸುತ್ತಿ ಸುತ್ತಿ ಹಿಮಾಲಯಾ ಪರ್ವತ ಪ್ರದೇಶದ ಹತ್ತಿರವಿದ್ದ ಒಂದು ದಟ್ಟವಾದ ಅರಣ್ಯವನ್ನು ಸೇರಿಕೊಂಡರು.




ಮಾರ್ಗಾಯಾಸದಿಂದ ಆದ ಬಳಲಿಕೆಯನ್ನು ಪರಿಹರಿಸಿಕೊಳ್ಳಲು ಅವರು ಒಂದು ಮರದ ನೆರಳಲ್ಲಿ ಕುಳಿತುಕೊಂಡರು. ಸ್ವಲ್ಪ ಹೊತ್ತಾದ ತರುವಾಯ ಮಹಾಶಾಸನನು, ಆದಿತ್ಯನೊಂದಿಗೆ "ತಮ್ಮಾ, ಅದೋ ಆ ಬೆಟ್ಟದ ತಪ್ಪಲಲ್ಲಿರುವ ಮರದ ಹತ್ತಿರ ಒಂದು ಕೊಳ ಕಾಣಿಸುತ್ತಿದೆ. ಅಲ್ಲಿಗೆ ಹೋಗಿ



ನೀನು ಬಾಯಾರಿಕೆ ತೀರಿಸಿಕೊಂಡು, ತಾವರೆ ಎಲೆಯನ್ನು ದೊನ್ನೆಗಳಂತೆ ಮಾಡಿ, ಅವುಗಳಲ್ಲಿ ನಮಗೂ ಸ್ವಲ್ಪ ನೀರು ತೆಗೆದುಕೊಂಡು ಬಾ" ಎಂದು ಹೇಳಿ ಕಳುಹಿಸಿದ.

ಅಣ್ಣನ ಅಪ್ಪಣೆಯಂತೆ ಆತನು ಅಲ್ಲಿಗೆ ತೆರಳಿ ಕೊಳದಲ್ಲಿ ಇಳಿಯಲು ಹೋದ. ಆದರೆ ಒಂದು ಪಿಶಾಚಿ ಅವನನ್ನು ಹಿಡಿದುಕೊಂಡು ಹೋಗಿ ನೀರಿನ ತಳಭಾಗದಲ್ಲಿದ್ದ ತನ್ನ ಮನೆ ಯಲ್ಲಿ ಬಂಧಿಸಿತು.

ಆದಿತ್ಯನು ಎಷ್ಟು ಹೊತ್ತಾದರೂ ಬಾರ ದಿರಲು, ಮಹಾಶಾಸನನು ಸೋಮದತ್ತನನ್ನು ಹೋಗಿ ನೋಡಿಬರುವಂತೆ ಕಳುಹಿಸಿದ.

ಸೋಮದತ್ತನನ್ನೂ ಸಹ ಸೆರೆಹಿಡಿಯಿತು ಆ ಪಿಶಾಚಿ. ಸೋಮದತ್ತನೂ ಕೂಡ ಹಿಂದಿ ರುಗದಿರುವುದನ್ನು ನೋಡಿ ಮಹಾಶಾಸನನು ಖಡ್ಗವನ್ನು ಕೈಯಲ್ಲಿ ಹಿಡಿದು ತಾನೇ ಕೊಳದ ಹತ್ತಿರಕ್ಕೆ ಹೋದ. ಎಷ್ಟು ಹುಡುಕಿದರೂ ತಮ್ಮಂದಿರು ಕಾಣಬರಲಿಲ್ಲ. ಅವರಿಗೇನೋ ಅಪಾಯ ಸಂಭವಿಸಿರಬೇಕೆಂದು ನೆನೆಸಿ, ಮಹಾಶಾಸನನು ಹಾಗೇ ಕೊಳದ ಕಟ್ಟೆಯ ಮೇಲೆ ನಿಂತಿದ್ದ. ಮಿಕ್ಕವರಿಬ್ಬರಂತೆ ಈತ ದುಡುಕಿ ಕೊಳದಲ್ಲಿ ಇಳಿಯುವುದಿಲ್ಲವೆಂದು ಮರೆಯಲ್ಲಿದ್ದ ಪಿಶಾಚಿಗೆ ತಿಳಿದಿತ್ತು.

ಆಗ ಆ ಪಿಶಾಚಿ ಬೇಡರವನ ವೇಷ ತಾಳಿ ಮಹಾಶಾಸನನ ಹತ್ತಿರ ಬಂದು "ಅಯ್ಯಾ ತುಂಬಾ ಬಳಲಿರುವಂತೆ ಕಾಣುತ್ತಿರುವಿರಿ. ಈ ಕೊಳದ ನೀರು ತುಂಬಾ ತಂಪಾ ಗಿರುತ್ತದೆ. ಕುಡಿದು ಬಾಯಾರಿಕೆ ತೀರಿಸಿ ಕೊಳ್ಳಿ" ಎಂದು ಹೇಳಿತು.

ಈ ಮಾತುಗಳನ್ನು ಕೇಳಿ ಮಹಾಶಾಸನನು "ಎಲಾ, ನಿನ್ನ ರೀತಿಯನ್ನು ನೋಡಿದರೆ ನನ್ನ ತಮ್ಮಂದಿರಿಬ್ಬರಿಗೂ ನೀನೇ ಏನೋ ಮೋಸಮಾಡಿರುವಂತಿದೆ" ಎಂದ.

"ಹೌದು, ನಾನು ಅವರನ್ನು ಸೆರೆಹಿಡಿ ದಿದ್ದೇನೆ" ನಿರ್ಭಯವಾಗಿ ನುಡಿದ ಬೇಡ ರವನ ವೇಷ ಧರಿಸಿದ್ದ ಪಿಶಾಚಿ.

"ಏಕೆ?" ಎಂದು ಕೇಳಿದ ಮಹಾಶಾಸನ.

"ಈ ಕೊಳವನ್ನು ಪ್ರವೇಶಿಸುವ ಪ್ರಾಣಿಗ ಳಲ್ಲಿ ಜ್ಞಾನಸಂಪನ್ನರ ಹೊರತು ಮಿಕ್ಕವ ರೆಲ್ಲಾ ನನ್ನ ಅಧೀನ. ಇದು ಕುಬೇರ ಮಹಾ ರಾಜರ ಆಜ್ಞೆ. ತಿಳಿಯಿತೆ?"



"ಹಾಗಾದರೆ ನಿನಗೆ ನಜವಾಗಿ ಜ್ಞಾನ ಸಂಪಾದನೆಯಲ್ಲಿ ಆಸಕ್ತಿಯಿರುವುದೇ? ಅಂತಹ ಅಪೇಕ್ಷೆಯಿದ್ದರೆ ನಾನು ಹೇಳಿಕೊಡುತ್ತೇನೆ" ಎಂದ ಮಹಾಶಾಸನ.

"ಓ, ಸಿದ್ಧವಾಗಿದ್ದೇನೆ. ಉಪದೇಶಮಾಡಿ" ಎಂದ ಆ ಬೇಡರವನು.

ಅದಕ್ಕೆ ಮಹಾಶಾಸನನು "ನೀನು ಸಿದ್ಧನಾಗಿರಬಹುದು. ಆದರೆ ನಾನು ಮಾರ್ಗಾಯಾಸದಿಂದ ತುಂಬಾ ಬಳಲಿರುವೆನು. ಈಗ ಉಪದೇಶಮಾಡಲು ಚೈತನ್ಯವಿಲ್ಲ" ಎಂದ.

ಕೂಡಲೇ ಬೇಡರವನ ವೇಷ ಧರಿಸಿದ್ದ ಆ ಪಿಶಾಚಿ ಮಹಾಶಾಸನನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ, ಆಯಾಸ ಪರಿಹಾರವಾಗುವಂತೆ ಸ್ನಾನಪಾನಾದಿಗಳನ್ನು ಮಾಡಿಸಿ, ಅತಿಥಿಯನ್ನು ಉಚಿತಾಸನದಲ್ಲಿ ಕುಳ್ಳಿರಿಸಿ, ತಾನು ಆತನ ಪಾದಗಳ ಬಳಿ ವಿನಯದಿಂದ ಕುಳಿತುಕೊಂಡ.

"ತಮ್ಮಾ, ನೀನು ಕೋರಿದಂತೆ ಜ್ಞಾನ ಬೋಧೆ ಮಾಡುತ್ತೇನೆ. ಶ್ರದ್ಧೆಯಿಂದ ಕೇಳು" ಎಂದು ಬೊಧೆ ಮಾಡಿದ ಮಹಾಶಾಸನ.

ಆಗ ಬೇಡರವನು ತನ್ನ ನಿಜ ಸ್ವರೂಪವನ್ನು ಹೊಂದಿ "ಮಹಾತ್ಮನೇ, ನೀನು ಮಹಾ ಜ್ಞಾನಿ. ನಿನ್ನ ಮಾತಿನಿಂದ ನಾನು ತೃಪ್ತನಾದೆ. ನಿನ್ನ ತಮ್ಮಂದಿರಲ್ಲಿ ಒಬ್ಬಾತನನ್ನು ಹಿಂತಿರುಗಿ ಕೊಡಲು ನಿರ್ಧರಿಸಿರುವೆನು. ಇಬ್ಬರಲ್ಲಿ ನಿನಗೆ ಯಾರು ಬೇಕೋ ಕೋರಿಕೋ" ಎಂದಿತು.



ಸ್ವಲ್ಪವಾದರೂ ಸಂದೇಹಿಸದೆ "ಆದಿತ್ಯನನ್ನು ಕೊಡು" ಎಂದ ಮಹಾಶಾಸನ.

ಅದಕ್ಕೆ ಪಿಶಾಚಿ "ಅಯ್ಯಾ, ಹಿರಿಯನಿರುವಾಗ ಕಿರಿಯವನನ್ನು ಕೋರಿಕೊಳ್ಳುವುದು ನ್ಯಾಯವೇ? ಆತನ ಜ್ಯೇಷ್ಠತ್ವವನ್ನು ನಿರಾಕರಿಸಬಹುದೇ?"

ಈ ಪ್ರಶ್ನೆಗೆ ಮಹಾಶಾಸನನು—

"ಪಿಶಾಚಿಯೇ, ನಾನೆಂದಿಗೂ ಧರ್ಮಮಾರ್ಗವನ್ನು ಬಿಟ್ಟು ಮಾತನಾಡುವವನಲ್ಲ. ನನ್ನ ತಾಯಿಗೆ ನಾನು ಉಳಿದಿರುವಾಗ, ನನ್ನ ಚಿಕ್ಕಮ್ಮನಿಗೆ ಒಬ್ಬ ಮಗನಾದರೂ ಇರಬೇಡವೇ? ಅದು ಒತ್ತಟ್ಟಿಗಿರಲಿ. ಈ ನನ್ನ ಕಿರಿಯ ಸಹೋದರನಿಗಾಗಿಯೇ ಆತನ ತಾಯಿ ರಾಜ್ಯವನ್ನು ಕೋರಿದಳು. ನಮ್ಮ

ತಂದೆ ಇಷ್ಟವಿಲ್ಲದೆ ನಮ್ಮನ್ನು ಕಾಡಿಗೆ ಕಳುಹಿಸಿದ. ಆದರೆ ಸೋದರ ಪ್ರೇಮದಿಂದ ಅನಾಯಕನಾದ ಈ ಹುಡುಗನೂ ನಮ್ಮ ಹಿಂದೆ ಬಂದುಬಿಟ್ಟ. ನಮ್ಮೊಂದಿಗೆ ಅವನೂ ಕಷ್ಟಪಡುತ್ತಿದ್ದಾನೆ. ಅವನನ್ನು ಬಿಟ್ಟುಬಿಟ್ಟು ಹಿರಿಯುವರಾದ ನಾವಿಬ್ಬರೇ ನಗರ ಪ್ರವೇಶ ಮಾಡಿದಾಗ 'ಆದಿತ್ಯನೆಲ್ಲಿ?'' ಎಂದು ಜನ ಕೇಳುವುದಿಲ್ಲವೇ? "ಅವನನ್ನು ಪಿಶಾಚಿ ನುಂಗಿಬಿಟ್ಟಿತು" ಎಂದು ಹೇಳಿದರೆ ನಮ್ಮ ಮಾತನ್ನು ಯಾರಾದರೂ ನಂಬುವರೇ? ಜನಕ್ಕೆ ವಿಸ್ಮಯಕರವಾಗಿ ಕಾಣುವುದಿಲ್ಲವೇ? ಲೋಕಾಪವಾದವನ್ನು ಸಹಿಸಬಲ್ಲೆವೇ?'' ಎಂದು ಪ್ರಶ್ನೆಮಾಡಿದ.

ಆಗ ಪಿಶಾಚಿ "ಮಹಾತ್ಮನೇ? ನೀನು ಜ್ಞಾನಸಂಪನ್ನನು ಮಾತ್ರನೇ ಅಲ್ಲ, ನಿನ್ನ ನಡೆನುಡಿಗಳಲ್ಲಿ ಧರ್ಮವು ಎದ್ದು ಕಾಣುತ್ತದೆ" ಎಂದು ಮೆಚ್ಚಿಕೊಂಡು, ಆತನ ತಮ್ಮಂದಿರಿಬ್ಬರನ್ನೂ ತಂದು ಮಹಾಶಾಸನನಿಗೆ ಒಪ್ಪಿಸಿದ. ಅಂದಿನಿಂದ ಆ ಮೂವರು ಸಹೋದರರು ಪಿಶಾಚಿಯೊಂದಿಗೆ ಗೆಳೆತನ ಬೆಳೆಸಿದರು. ಅಲ್ಲೇ ಅವರು ಅದರ ಅತಿಥಿಗಳಾಗಿ ಕಾಲ ದೂಡುತ್ತಿದ್ದರು.

ಕೆಲ ದಿನಗಳಾದನಂತರ ದೇವದತ್ತನು ಮರಣಿಸಿದನೆಂದು ಸುದ್ದಿ ಬಂತು. ಮಹಾಶಾಸನನು ಸಹೋದರರನ್ನೂ ಪಿಶಾಚಿಯನ್ನೂ ತನ್ನ ಸಂಗಡ ಕರೆದುಕೊಂಡು ಕಾಶೀರಾಜ್ಯವನ್ನು ಸೇರಿಕೊಂಡ.

ಹಿರಿಯನಾದ ಮಹಾಶಾಸನನು ಸಿಂಹಾಸನವನ್ನೇರಿದ. ತಮ್ಮನಾದ ಸೋಮದತ್ತನನ್ನು ತನ್ನ ಪ್ರತಿನಿಧಿಯನ್ನಾಗಿಯೂ, ಕಡೆಯ ಸಹೋದರನಾದ ಆದಿತ್ಯನನ್ನು ಸೇನಾಧಿಪತಿಯನ್ನಾಗಿಯೂ ನೇಮಿಸಿದ.

ತಮಗೆ ಉಪಕಾರಮಾಡಿದ ಪಿಶಾಚಿಯನ್ನು ಮಹಾಶಾಸನನು ಮರೆಯಲಿಲ್ಲ. ಅದಕ್ಕೆ ಒಂದು ನಿವಾಸವನ್ನು ತೋರಿಸಿ, ಅದರ ಊಟ ಉಪಚಾರಗಳಿಗೆ ಪ್ರತ್ಯೇಕ ಏರ್ಪಾಟುಗಳನ್ನು ಮಾಡಿಸಿದ. ಪಿಶಾಚಿಯೂ ಅವನಿಗೆ ಅಧೀನವಾಗಿ ಸುಖವಾಗಿತ್ತು.



# ಮರೆಯಲ್ಲಿರುವ ಊರುಗಳು

ಇಲ್ಲಿ ಕೆಳಗೆ ಹದಿನೈದು ವಾಕ್ಯಗಳಿವೆ. ಒಂದೊಂದು ವಾಕ್ಯದಲ್ಲಿಯೂ ಒಂದೊಂದು ಊರು ಅಡಗಿಕೊಂಡಿದೆ. ಅದು ಯಾವ ಊರು ಎಂಬುದನ್ನು ನೀವೇ ನೋಡಿ ಕಂಡುಹಿಡಿಯಿರಿ. ನಿಮಗೆ ಸಾಧ್ಯವಾಗದಿದ್ದರೆ ಈ ಪುಟವನ್ನು ತಲೆಕೆಳಗೆ ಮಾಡಿ ನೋಡಿದರೆ ಸಾಕು. ತಿಳಿದುಬಿಡುತ್ತದೆ.

೧. ಇದೋ ಕಾರಿನಬೊಂಬೆ—ಬೊಂ ಬೊಂ ಬೊಂ, ಬಾಯಿಲ್ಲಿ ಮಗೂ!
೨. ಪದವಿಗೆ ತಕ್ಕ ಉಡುಗೆ ಉಡು; ಪಿಸುಣನಾಗಬೇಡ.
೩. ಪಂಚಾಂಗ ದಾಧಾರವಾಡತೊಡಗಿ ಮನೆ ಮಗುಚಿತು!
೪. ಅಮೀರ್‌ಖಾನ್ ಪೂರ್ಣ ತೊಗರಿಬೇಳೆ ವ್ಯಾಪಾರಿ.
೫. ಅಬ್ದುಲ್ಲಾ ಹೋರಾಟಕ್ಕೆ ಸಿದ್ಧನಾದ.
೬. ಸುಧಾಕರ್ ನೂಲುನೂತೇ ಲಕ್ಷಾಧಿಕಾರಿಯಾದ.
೭. ಇದನ್ನು ಕೇಳಿ ಸರಸಿ ಮ್ಲಾನಮುಖಿಯಾದಳು.
೮. ಕಳ್ಳನ ಮೈ ಸೂರಿನೆಡೆಯಲ್ಲಿ ತೋರಿಬಂತು.
೯. ಸಂಸ್ಕೃತದಲ್ಲಿ 'ಅಹಂ' ಪೆರ್ಮೆಯನ್ನು ಸೂಚಿಸುವ ಒಂದು ಪದ.
೧೦. ಕಡುಚತುರ ಕಾಳಪ್ಪ ಒಂದು ಹೊಸಾಕಾರ್ ಕಳವುಮಾಡಿ ತಂದ.
೧೧. ಕುರುವೊಡೆದಾಗ ನಡುನಿಶಿ; ರಸಿಗೆಯೊಸರಿದ್ದು ತಿಳಿಯಲೇ ಇಲ್ಲ.
೧೨. ನೋಡಿಲ್ಲಿ ಮುಳ್ಳು ಕಂತಿತು.
೧೩. ಅನ್ನದ ಕಲ ಕತ್ತೆಯೊದ್ದೊಡೆಯಿತು.
೧೪. ಸಂತಸವಾಂತಿರು, ಪತಿಬರುವನೀಗ.
೧೫. ಕೃಷ್ಣನಾಡಿದುದು ಪ್ರೇಮದ ರಾಸಕ್ರೀಡೆ.

---

| | | |
|---|---|---|
| ೧. ಬೊಂಬಾಯಿ. | ೬. ಕರ್ನೂಲು. | ೧೧. ಶಿರಸಿ. |
| ೨. ಉಡುಪಿ. | ೭. ಸಿಮ್ಲಾ. | ೧೨. ಡಿಲ್ಲಿ |
| ೩. ಧಾರವಾಡ. | ೮. ಮೈಸೂರು. | ೧೩. ಕಲಕತ್ತೆ. |
| ೪. ಖಾನ್‌ಪೂರ್. | ೯. ಹಂಪೆ. | ೧೪. ತಿರುಪತಿ. |
| ೫. ಲಾಹೋರು. | ೧೦. ಕಾರ್ಕಳ. | ೧೫. ಮದರಾಸ್. |

# ಪುಷ್ಪವನದಲ್ಲಿ ಬಿಕ್ಕಟ್ಟು



ಲಾವಣ್ಯಪುರದಲ್ಲಿ ಒಂದು ನಂದನವನ. ವನದ ಪಕ್ಕದಲ್ಲಿ ಹೂವಿನ ತೋಟ. ಆ ತೋಟದಲ್ಲಿ ಸೊಗಸಾದ ಒಂದು ಕೊಳ. ಅದರ ತುಂಬಾ ಹೂ. ಎಲ್ಲೆಲ್ಲೂ ಪುಷ್ಪಮಯ. ಬಣ್ಣ ಬಣ್ಣದ ಹೂವುಗಳು, ಬಗೆ ಬಗೆಯ ಪುಷ್ಪಗಳು. ಸುವಾಸನೆಯನ್ನು ಹೊರಹೊಮ್ಮಿಸಿ ಪರಮಾನಂದ ಗೊಳಿಸುವ ಕುಸುಮಗಳು ನೆಲದಮೇಲೂ, ನೀರಿನಮೇಲೂ ಹರಡಿವೆ.

ಇಷ್ಟು ಅಸಂಖ್ಯಾತವಾಗಿರುವ ಕುಸುಮಗಳಿಗೆ ರಾಜನಿರುವನು. ಪ್ರತಿನಿತ್ಯ ಆ ರಾಜನು ದರ್ಬಾರುಮಾಡುತ್ತಾನೆ. ತೀರ್ಪು ಕೊಡುತ್ತಾನೆ. ಬಹಳಕಾಲ ಪುಷ್ಪರಾಜ್ಯ ರಾಮರಾಜ್ಯದಂತೆ ಸುಖಮಯವಾಗಿ ಸಾಗಿತು.

ಆದರೆ ಒಂದು ದಿನ ಇದ್ದಕ್ಕಿದ್ದಹಾಗೆ ಹೂದೋಟದಲ್ಲಿ ಭಾರಿ ಜಿಜ್ಞಾಸೆ ಉಂಟಾಯಿತು. ಮಂತ್ರಿ ಪದವಿಗೆ ಸಂಬಂಧಪಟ್ಟ ಬಿಕ್ಕಟ್ಟೊದಗಿತು. ಪೊದರಿನಲ್ಲಿ ಬಿದ್ದಿದ್ದ ತಾಳೆಹೂ ವಯ್ಯಾರದಿಂದ ಎದ್ದು "ನನ್ನ ಪರಿಮಳ ಯೋಜನೆಗಳ ದೂರ ವ್ಯಾಪಿಸುತ್ತದೆ. ನಾನು ಹೊರಹೊಮ್ಮಿಸುವ ಸುಗಂಧಕ್ಕೆ ಎಷ್ಟೋ ದೂರದಲ್ಲಿರುವ ಜನರು 'ಅಹಾ ಎಲ್ಲಿಂದ ಈ ಸುವಾಸನೆ ಬರುತ್ತಿದೆ' ಎಂದು ದಿಗ್ಭ್ರಮೆ ಹೊಂದುತ್ತಾರೆ. ಆದುದರಿಂದ ನಾನು ಗಣ್ಯನು" ಎಂದಿತು.

ಈ ಮಾತು ಕೇಳಿ ರೋಷಗೊಂಡು ನೀರಿನಿಂದ ಕಮಲ ತನ್ನ ಜಡೆಯನ್ನಾಡಿಸುತ್ತಾ ಮೇಲಕ್ಕೆದ್ದಿತು. "ನಿನ್ನ ಹಿರಿಮೆ ಯಾರಿಗೆ ಗೊತ್ತಿಲ್ಲ. ಮೈತುಂಬಾ ಮುಳ್ಳು. ಕಣ್ಣಿಗೆ ಅಂದವಾಗಿದ್ದರಲ್ಲವೇ ಉಳಿದ ಸಂಗತಿ? ಪುಷ್ಪಜಾತಿಯಲ್ಲೆಲ್ಲಾ ಅತ್ಯಂತ ಆಕರ್ಷಣೀಯವಾಗಿರುವ ನನ್ನನ್ನು ಪಡೆಯಲು ರಾಣೀವಾಸದವರು ಆತುರಪಡುತ್ತಾರೆ" ಎಂದಿತು.

ಇದಕ್ಕೆ ತಾಳೆಹೂ ಮೇಲ್ವಾಯ್ದು "ಏನು, ಕೆಂಪಾಗಿ ನೋಡಲು ಗೊಂಬೆಯಂತಿದ್ದರೆ ಸರಿಹೋಯಿತೇ? ಮುಳ್ಳು ಮುಳ್ಳು ಎಂದು ಬಡಬಡಿಸುತ್ತಿರುವೆಯಲ್ಲಾ – ಗೊಬ್ಬಳಿ ಹೂವಿ

ಇಂದಿರಾ ಗೋಪಾಲ, ಕಮಲಾಪುರ

ಗಿಲ್ಲವೆ, ಗುಲಾಬಿಗೆ ಮುಳ್ಳಿಲ್ಲವೇ? ಅವರೇನು ಸಾಮಾನ್ಯರೇ? ಆಲೋಚನೆಮಾಡಿ ಮಾತಾಡು" ಎಂದು ಗದರಿಸಿತು.

ಈ ಗೊಂದಲ ಕೇಳಿ ರಾಜ್ಯದಲ್ಲಿರುವ ಹೂಗಳೆಲ್ಲಾ ಓಡಿಬಂದವು. ಕೆಲವು ಆ ಪಕ್ಷಕ್ಕೆ, ಕೆಲವು ಈ ಪಕ್ಷಕ್ಕೆ ಸೇರಿದವು. ಭಾರಿ ರಗಳೆ ಪ್ರಾರಂಭವಾಯಿತು.

ಈ ರಗಳೆ ಹೂರಾಜನ ವರೆವಿಗೂ ಮುಟ್ಟಿತು. ರಾಜ ಬಂದ. ಆಗ ದರ್ಬಾರಿಗೆ ನ್ಯಾಯಾಧಿಪತಿ ಸೂರ್ಯಕಾಂತಿಹೂ. ಇದು ಹಗಲೆಲ್ಲಾ ಸೂರ್ಯನ ನಮಸ್ಕಾರಮಾಡಿ ರಾತ್ರಿಹೊತ್ತಿನಲ್ಲಿ ವ್ಯಾಜ್ಯಗಳ ವಿಚಾರಣೆ ನಡೆಸಿ ತೀರ್ಪಿಯುವುದು.




ಕಮಲ, ತಾಳೆಹೂಗಳ ಜಗಳ ಮಾರನೇಯ ದಿನಕ್ಕೆ ಮುಂದಕ್ಕೆ ಹಾಕಲಾಯಿತು. ಮಾರನೇಯದಿನ ವಾದಿ ಪ್ರತಿವಾದಿ ಮೊದಲೇ ನ್ಯಾಯಸ್ಥಾನವನ್ನು ಸೇರಿದವು.

ಕತ್ತಲು ಸಮಯ. ವಾದಿ ಪ್ರತಿವಾದಿಗಳು ತಮ್ಮ ತಮ್ಮ ವಕೀಲರೊಂದಿಗೆ ಸಿದ್ಧರಾಗಿದ್ದಾರೆ. ನ್ಯಾಯಾಧಿಪತಿ ಮತ್ತು ರಾಜನು ಉಚಿತಸ್ಥಾನಗಳನ್ನು ಅಲಂಕರಿಸಿದರು. ಮೊದಲು ಕಮಲದ ಕಡೆ ತಿರುಗಿ ಸಮಜಾಯಿಸಿ ಹೇಳುವಂತೆ ಆಜ್ಞಾಪಿಸಿದರು.

ಕಮಲದ ಪಕ್ಷ ವಹಿಸಿದ್ದ ವಕೀಲನು ಎದ್ದು ನಿಂತು "ಪ್ರಭು, ನಮ್ಮ ಕಮಲದ ಪ್ರತಿಭೆ ಸೂರ್ಯನಿರುವಷ್ಟು ಸಮಯವೇ ಹೊರತು, ರಾತ್ರಿಯಾದರೆ ಕಮಲಕ್ಕೆ ಮಾತನಾಡಲೂ ಬರುವಂತಿಲ್ಲ" ಎಂದನು. ತೊಂದರೆ ಒದಗಿತು. ಹಗಲಿನಲ್ಲಿ ನ್ಯಾಯಾಧಿಪತಿ ತೀರ್ಮಾನ ಹೇಳುವಂತಿಲ್ಲ. ರಾತ್ರಿಹೊತ್ತು ಕಕ್ಷಿಗಾರ ಮಾತನಾಡುವಂತಿಲ್ಲ. ಇನ್ನು ಈ ಜಗಳದ ತೀರ್ಮಾನ ಹೇಗೆ? ಮತ್ತೊಂದು ಸಲ, ಮಾರನೇಯ ದಿವಸಕ್ಕೆ ವಾಯಿದೆ ಕೊಡಲಾಯಿತು.

ಈ ಸಂದರ್ಭದಲ್ಲಿ ತಾಳೆಹೂವಿಗೆ ಒಳ್ಳೇ ಉಪಾಯ ಹೊಳೆಯಿತು. ಅದೇನೆಂದರೆ ಬೆಳಕು ಕೊಡುವ ಒಂದು ವಿಚಿತ್ರವಾದ ಎಲೆಯ ಬಳಿಗೆ ಹೋಗಬೇಕೆನ್ನಿಸಿತು. ಸೂರ್ಯನಿಲ್ಲದೆ ಹೋದರೂ ಸಹ ತನ್ನ ಕಾಂತಿಯಿಂದ ಆ ಎಲೆ ಪ್ರಪಂಚವನ್ನೇ ಬೆಳಗಬಲ್ಲದು. ಈ ಉದ್ದೇಶದಿಂದ ತಾಳೆಹೂ ಬೆಳಕುನೀಡುವ ಎಲೆಯನ್ನು ಆಶ್ರಯಿಸಿತು.

ಮಾರನೇಯ ದಿನ ಪುಷ್ಪರಾಜ್ಯದ ಪ್ರಜೆಗಳೆಲ್ಲಾ ದರ್ಬಾರಿನಲ್ಲಿ ಹಾಜರಾದರು. ರಾಜ ಮತ್ತು ನ್ಯಾಯಾಧಿಪತಿ ತಮ್ಮ ತಮ್ಮ ಸ್ಥಾನಗಳನ್ನು ಅಲಂಕರಿಸಿದರು. ಅಂದು ಸಮಯ ಮೀರಿದರೂ ಸಂಜೆಯಾಗಿರಲಿಲ್ಲ. ಎಲ್ಲಿ ನೋಡಿದರೂ ಶಾಮಂತಿಗೆ ತನ್ನ ಕಾಂತಿಯಿಂದ ವಿಚಿತ್ರವಾಗಿ ಕಂಗೊಳಿಸುತಿತ್ತು. ಸೂರ್ಯನು ಮುಳುಗುವ ಮುನ್ನ ಸೂರ್ಯಕಾಂತಿ ಹೂ ದರ್ಬಾರಿಗೆ ಬಂದುದನ್ನು ಕಂಡು ಎಲ್ಲರೂ ಆಶ್ಚರ್ಯಚಕಿತರಾದರು.

ವಾದಿ ಪ್ರತಿವಾದಿಗಳ ಪರ ವಕೀಲರು ಬಿರುಸಾಗಿ ವಾದಿಸಿದರು. ಚರ್ಚೆ ಮುಗಿದ ನಂತರ ನ್ಯಾಯಾಧಿಪತಿ ಈ ರೀತಿ ತೀರ್ಪಿತ್ತರು: "ಈ ಕೇಸಿನಲ್ಲಿ ಹಾಜರಾಗಿರುವ ವಾದಿ ಮತ್ತು ಪ್ರತಿವಾದಿಗಳು ಇಬ್ಬರೂ ಹಿರಿಯರು. ಪ್ರಮುಖರು. ಪರಿಮಳಕ್ಕೆ ತಾಳೆ; ಅಂದಕ್ಕೆ ಕಮಲ. ಜಗತ್ತಿಗೆ ಇಬ್ಬರೂ ಆವಶ್ಯಕ. ಆದುದರಿಂದ ಈ ವ್ಯಾಜ್ಯ ಈ ದಿವಸವನ್ನು ವಜಾ ಮಾಡಲಾಗಿದೆ."

ಆಗ ರಾಜನು ಸಿಂಹಾಸನದಿಂದ ಎದ್ದು ನಿಂತು ಮುಗುಳುನಗೆ ಬೀರುತ್ತಾ "ಗೌರವನೀಯ ನಮ್ಮ ನ್ಯಾಯಾಧೀಶರಿತ್ತಿರುವ ತೀರ್ಮಾನ ತುಂಬಾ ಯುಕ್ತವಾದುದು. ನಮ್ಮಲ್ಲಿ ಐಕಮತ್ಯವಿಲ್ಲದೆ ಈ ಕೀಟಲೆ ಜಗಳಗಳಿರುವುದರಿಂದಲೇ ಮಾನವರು ನಮಗೆ ಹಿಂಸೆ ಕೊಡುತ್ತಿರುವರು. ಹೆಂಗಸರು ಅಂದಕ್ಕಾಗಿ ನಮ್ಮ ಕುತ್ತಿಗೆಗಳನ್ನು ಕಿವುಚಿ ಧರಿಸುತ್ತಿರುವರು! ದೊಡ್ಡ ಮನುಷ್ಯರನ್ನು ಸನ್ಮಾನಿಸಲು ನಮ್ಮ ಜಾತಿಯನ್ನು ಲೆಕ್ಕವಿಲ್ಲದಂತೆ ನಾಶ ಮಾಡಿ ಹಾರಗಳನ್ನು ಕಟ್ಟಿ ಧರಿಸುತ್ತಿದ್ದಾರೆ. ಏನೀ ಅನ್ಯಾಯ? ನಮ್ಮ ಸ್ಥಿತಿ ಸುಭದ್ರವಾಗಿ ಇರಬೇಕಾದರೆ, ನಮ್ಮ ಶ್ರೇಯಸ್ಸು ಬಯಸುವ ಉತ್ತಮ ಮಂತ್ರಿಗಳು ಅಗತ್ಯ. ಈಗ ಒಂದೊಂದು ಗುಣಕ್ಕೆ ಕೀರ್ತಿ ಪಡೆದಿರುವ ತಾಳೆ ಹೂ, ಕಮಲ ಇಬ್ಬರನ್ನೂ ನಮ್ಮ ಆಸ್ಥಾನ ಮಂತ್ರಿಗಳನ್ನಾಗಿ ನೇಮಿಸಿರುತ್ತೇವೆ" ಎಂದ. ಇದಕ್ಕೆ ಸಮ್ಮತಿಸಿ ಪುಷ್ಪಜಾತಿಯೆಲ್ಲಾ ಜಯಜಯಕಾರ ಮಾಡಿತು.





# ಅಂಗವಸ್ತ್ರ

ಆರಾವಳಿ ಬೆಟ್ಟಗಳಲ್ಲಿ ಚಿದಾನಂದನೆಂಬ ಒಬ್ಬ ಯೋಗಿ ಇದ್ದ. ಒಂದುದಿನ ಹನ್ನೆರಡು ವರ್ಷದ ಬಾಲಕನೊಬ್ಬ ಪ್ರಾಣಭಯದಿಂದ ಓಡೋಡಿಬಂದು ಆತನ ಪಾದಗಳಮೇಲೆ ಬಿದ್ದು ಶರಣಾಗತನಾದ.

ಯೋಗಿ ಆ ಬಾಲಕನ ಮೈದಡವಿ "ಯಾರು ನೀನು. ಏನು ಆಪತ್ತು ಒದಗಿದೆ? ಅಂಜದೆ ಹೇಳು" ಎಂದು ಕೇಳಿದ.

"ನಾನು ಜಸಲ್ಮೀರ್ ಸಂಸ್ಥಾನಾಧೀಶ್ವರನಾದ ಬೀಜೀರಾಯನ ಮಗ. ನನ್ನ ಹೆಸರು ದೇವರಾಜ. ಶತ್ರುಗಳು ನಮ್ಮ ಕೋಟೆಯನ್ನು ವಶಮಾಡಿಕೊಂಡು, ನಮ್ಮ ತಂದೆಯನ್ನು ಕೊಂದುಬಿಟ್ಟರು. ನನ್ನನ್ನು ಕೊಲ್ಲಲು ಬೆನ್ನಟ್ಟಿಕೊಂಡು ಬರುತ್ತಿದ್ದಾರೆ" ಎಂದ.

ಯೋಗಿ ಕೂಡಲೇ ಒಂದು ಅಂಗವಸ್ತ್ರವನ್ನು ತಂದು ಆ ಹುಡುಗನಿಗೆ ಕೊಟ್ಟು "ನಿನ್ನ ಷರಾಯಿ, ಅಂಗಿ ಬಿಚ್ಚಿ ಇದನ್ನು ಉಟ್ಟುಕೋ" ಎಂದು ಹೇಳಿ ಆ ರಾಜಪುತ್ರನ ಬಟ್ಟೆಗಳನ್ನು ಯಾರಿಗೂ ಕಾಣಿಸದಂತೆ ಸೂರಿನಲ್ಲಿ ಸೇರಿಸಿದ. ತನ್ನ ಜನಿವಾರದ ಎಳೆಗಳಲ್ಲಿ ಒಂದನ್ನು ತೆಗೆದು ಹುಡುಗನ ಕೊರಳಲ್ಲಿ ಹಾಕಿ "ನಿನ್ನ ಹೆಸರೇನು? ಎಂದು ಯಾರಾದರೂ ಕೇಳಿದರೆ ಸೋಮಭಟ್ಟನೆಂದು ಹೇಳು" ಎಂದು ಸಲಹೆಯಿತ್ತ.

ಅಷ್ಟರಲ್ಲಿ ಕುದುರೆಗಳ ಗೊರಸಿನ ಸಪ್ಪಳ ಕೇಳಿಸಿತು. 'ಅದೋ ಅವರು ಬರುತ್ತಿದ್ದಾರೆ' ಎಂದ ದೇವರಾಜ.

"ಭಯಪಡಬೇಡ. ನನಗೊಂದು ಎಲೆ ಹಾಕಿ, ನೀನೊಂದು ಹಾಕಿಕೊ. ಊಟಮಾಡೋಣ" ಎಂದ ಯೋಗಿ.

ಅವರಿಬ್ಬರೂ ಬಡಿಸಿಕೊಂಡು, ಇನ್ನೇನು ತುತ್ತು ಬಾಯಿಯಲ್ಲಿಟ್ಟುಕೊಳ್ಳುವ ವೇಳೆಗೆ ಕೆಲವರು ಓರೆಯಾಗಿ ಹಾಕಿದ್ದ ಬಾಗಿಲನ್ನು ತಳ್ಳಿಕೊಂಡು ಒಳಗೆ ಪ್ರವೇಶಿಸಿದರು. "ಯಾರವರು" ಎಂದು ತಿರುಗಿ ನೋಡಿ ಕೇಳಿದ ಯೋಗಿ. ಆತನು ಊಟಮಾಡುತ್ತಿರುವುದನ್ನು

ಪಿ. ಶಾಂತರಾಜು, ಬೆಂಗಳೂರು



ನೋಡಿ ಆ ಸವಾರರು "ಕ್ಷಮಿಸಬೇಕು. ರಾಜಕುಮಾರನಾರಾದರೂ ಈ ದಾರಿಯಲ್ಲಿ ಬಂದನೇ ಎಂದು ವಿಚಾರಿಸಲು ಬಂದೆವು" ಎಂದರು. ಅದಕ್ಕೆ ಯೋಗಿ "ನಾನು ಅಡಿಗೆ ಮಾಡುತ್ತಾ ಇಲ್ಲೇ ಇದ್ದೆನಲ್ಲಾ. ಲೋ, ಸೋಮಭಟ್ಟ, ನೀನು ಸಮಿತ್ತುಗಳನ್ನು ಆರಿಸಿತರಲು ಹೋದಾಗ ಯಾರನ್ನಾದರೂ ಕಂಡೆಯಾ?" ಎಂದ. ದೇವರಾಜನು "ನನಗೆ ಯಾರೂ ಕಾಣಿಸಲಿಲ್ಲ ಗುರುಗಳೇ... ಸ್ವಲ್ಪ ಹುಳಿ ಬಡಿಸಲೇ?" ಎಂದ ತುಸವಾದರೂ ಸಂಕೋಚಪಡದೆ.

ಸವಾರರು ದೇವರಾಜನು ಆ ಯೋಗಿಯ ಶಿಷ್ಯನಿರಬೇಕೆಂದು ಭಾವಿಸಿದರು. ಯೋಗಿಗೆ ನಮಸ್ಕಾರಮಾಡಿ ಅವರು ತಮ್ಮ ದಾರಿ ಹಿಡಿದರು. ದೇವರಾಜನು ಯೋಗಿಯ ಪಾದಗಳಮೇಲೆ ಬಿದ್ದು "ಸ್ವಾಮಿ. ನನ್ನ ಪ್ರಾಣ ಕಾಪಾಡಿ ಪುಣ್ಯ ಕಟ್ಟಿಕೊಂಡಿರಿ. ನಿಮ್ಮ ಋಣ ಹೇಗೆ ತೀರಿಸಲಿ?" ಎಂದ.

"ಋಣ ಗಿಣ ಇಲ್ಲ. ನಿನಗಿಲ್ಲಿ ಎಷ್ಟುಕಾಲ ವಿರಲು ಇಷ್ಟವುಂಟಾಗುವುದೋ ಅಷ್ಟು ದಿನಗಳಿದ್ದು ಆ ತರುವಾಯ ಹೋಗಿ ಎಲ್ಲಿಯಾದರೂ ರಾಜ್ಯವನ್ನು ಸ್ಥಾಪಿಸಿಕೋ" ಎಂದ ಯೋಗಿ ಚಿದಾನಂದ.

ಖಡ್ಗ ಹಿಡಿದು ವೀರವಿಹಾರ ಮಾಡುವ ಕೈಗಳಿಗೆ ಅಡವಿಯಲ್ಲಿ ಸಮಿತ್ತುಗಳನ್ನು ಆರಿಸುತ್ತಾ ಕುಳಿತಿರಲು ಎಷ್ಟು ದಿನವೆಂತ ಸಾಧ್ಯ? ಕೆಲವು ದಿನಗಳಾದ ತರುವಾಯ ದೇವರಾಜನು ಯೋಗಿಯ ಮುಂದೆ ನಿಂತು "ಸ್ವಾಮಿ ನನಗೆ ಆಶೀರ್ವಾದ ಮಾಡಿ ಕಳುಹಿಸಿ. ಮಿತ್ರರಾಜ್ಯವನ್ನು ಸಂಪಾದಿಸಿ ಕೊಳ್ಳುವೆನು" ಎಂದು ಅಪ್ಪಣೆ ಕೇಳಿದ.

"ತಥಾಸ್ತು" ಎಂದು ಚಿದಾನಂದ ಯೋಗಿ ಎದ್ದು ಹೋಗಿ ಯಾವುದೋ ಒಂದು ಎಲೆಯನ್ನು ತಂದು ಅದರ ರಸವನ್ನು ಬಿದುರು ಗೊಟ್ಟದಲ್ಲಿ ಹಾಕಿ, ದೇವರಾಜನಿಗೆ ಕೊಟ್ಟು, "ಈ ರಸ ಕಬ್ಬಿಣವನ್ನು ಚಿನ್ನವನ್ನಾಗಿ ಮಾಡುವುದು. ರಾಜ್ಯವನ್ನು ಸ್ಥಾಪಿಸಬೇಕೆಂದರೆ ಯಥೇಚ್ಛವಾಗಿ ಹಣ ಬೇಕಾಗುವುದು. ಅದರಿಂದ ಇದನ್ನು ಕೊಡುತ್ತಿದ್ದೇನೆ".

ದೇವರಾಜನು ಅದನ್ನು ಜತನಮಾಡಿ "ನಿಮ್ಮ ಜ್ಞಾಪಕಾರ್ಥವಾಗಿ ಈ ಅಂಗವಸ್ತ್ರ

ವನ್ನು ಸಹ ತೆಗೆದುಕೊಂಡು ಹೋಗಲು ಅಪ್ಪಣೆ ದಯಪಾಲಿಸಬೇಕು" ಎನ್ನಲು ಆ ಯೋಗಿ ಸಮ್ಮತಿಸಿದನು.

ದೇವರಾಜನು ತನ್ನ ಸೋದರ ಮಾವನಾದ ಭೂತರಾಜನ ರಾಜ್ಯಕ್ಕೆ ಹೋದ. ದೇವರಾಜನಂತೆಯೇ ಆತನ ತಾಯಿಯೂ ಸಹ ಶತ್ರುಗಳ ಕೈಯಿಂದ ಪಾರಾಗಿ ಅಣ್ಣನ ಮನೆ ಸೇರಿಕೊಂಡಿದ್ದಳು. ತನ್ನ ಮಗನು ಬದುಕಿ ಬಂದಿರುವುದನ್ನು ನೋಡಿ ಆಕೆ ಲಗುಬಗನೆ ಬಂದು ಉಪ್ಪನ್ನು ತಂದು ದೃಷ್ಟಿ ತೆಗೆದು ಅದನ್ನು ನೀರಿನಲ್ಲಿ ಹಾಕಿ 'ಮಗು ನಿನ್ನ ಶತೃಗಳುಸಹ ಈ ಉಪ್ಪಿನಂತೆಯೇ ಕರಗಿ ರೂಪು ಇಲ್ಲದಂತೆ ಆಗಲಿ' ಎಂದು ಹೇಳಿ, ಅಪ್ಪಿಕೊಂಡಳು.

"ಅಮ್ಮಾ, ಮಂತ್ರಕ್ಕೆ ಮಾವಿನಕಾಯಿ ಉದುರುವುದಿಲ್ಲ. ಅದಕ್ಕಾಗಿಯೇ ನಾನೊಂದು ಕೋಟೆಯನ್ನು ನಿರ್ಮಿಸಬೇಕು. ಸೇನೆಯನ್ನು ಶೇಖರಿಸಬೇಕು. ಆಮೇಲೆ ಶತ್ರುಗಳನ್ನು ಓಡಿಸಿ ನಮ್ಮ ಜಸಲ್ಮೀರು ಕೋಟೆಯನ್ನು ವಶಪಡಿಸಿಕೊಳ್ಳಬೇಕು. ಕೋಟೆ ಕಟ್ಟಲು ಒಂದಿಷ್ಟು ಸ್ಥಳ ಕೊಡುವಂತೆ ಮಾವನಿಗೆ ಹೇಳು" ಎಂದ ದೇವರಾಜ.

ಆಕೆ ಅಣ್ಣನನ್ನು ಕೇಳಿದಳು. ಅದಕ್ಕೆ ಭೂತರಾಜನು "ಸ್ಥಳಗಿಳ ಇಲ್ಲ. ಹೋಗು ಹೋಗು" ಎಂದು ಗದರಿದ. ಆ ಸಮಯಕ್ಕೆ ಸರಿಯಾಗಿ ಅಲ್ಲಿಗೆ ಒಬ್ಬ ಮೋಚಿ ಎತ್ತಿನ ಚರ್ಮವನ್ನು ತಂದು ರಾಜನಿಗೆ ಕಾಣಿಕೆಯಾಗಿ ಕೊಟ್ಟ. ಆ ಕಾಣಿಕೆಯನ್ನು ಕಂಡು




ದೇವರಾಜ "ಮಾವ, ಬಹಳ ಸ್ಥಳವೇನೂ ಬೇಡ. ಆ ಎತ್ತಿನ ಚರ್ಮ ಹಿಡಿಸುವಷ್ಟು ಪ್ರದೇಶ ಕೊಟ್ಟರೆ ಸಾಕು" ಎಂದ. ಅಷ್ಟೇ ತಾನೇ ಎಂದು ನೆನೆಸಿ ಭೂತರಾಜ ಒಂದು ಮರಳಿನ ಪ್ರದೇಶ ತೋರಿಸಿ, "ಅಲ್ಲಿ ತೆಗೆದುಕೋ" ಎಂದ. 'ಎಲಾ, ಎತ್ತಿನ ಚರ್ಮದಷ್ಟು ಭೂಮಿ ತೆಗೆದುಕೊಂಡು ಇವನೇನು ಮಾಡುವನು' ಎಂದು ದೇವರಾಜನ ತಾಯಿ ವಿಸ್ಮಯಗೊಂಡಳು. ದೇವರಾಜನು ಆ ಎತ್ತಿನ ಚರ್ಮವನ್ನು ಸಣ್ಣ ನಾರಿನಂತೆ ಕತ್ತರಿಸಿ ಒಂದೊಕ್ಕೊಂದು ಗುಂಟು ಹಾಕಿ, ಆ ಹಗ್ಗದಿಂದ ಕೆಲವು ಎಕರೆ ವಿಸ್ತೀರ್ಣ ಭೂಮಿಯನ್ನು ಆಕ್ರಮಿಸಿ "ಇದು ಎತ್ತಿನ ಚರ್ಮ ಹಿಡಿಸುವಷ್ಟು ಪ್ರದೇಶ" ಎಂದ.





ಭೂತರಾಜನು ಬಂದು ನೋಡಿ ಎದೆ ಎದೆ ಬಡಿದುಕೊಂಡ. "ಮರಳುಗಾಡು ತಾನೇ ಮಾವಯ್ಯಾ" ಎಂದು ಸಮಾಧಾನ ಹೇಳಿದ ದೇವರಾಜ. ಆ ಮಾತು ಕೇಳಿ ಭೂತರಾಜ ನಿಗೆ ಮನಸ್ಸು ಸ್ವಲ್ಪ ನೆಮ್ಮದಿ ಆಯಿತು. ಅರಮನೆಗೆ ಹಿಂತಿರುಗಿದ. ದೇವರಾಜ ಮಾರ ನೇಯ ದಿನದಿಂದಲೇ ಕೆಲಸಕ್ಕೆ ಪ್ರಾರಂಭಿ ಸಿದ. ಉತ್ತಮ ಕೆಲಸಗಾರರನ್ನು ಕರೆಯಿಸಿ, ಕೋಟೆ ಕಟ್ಟಲು ಪಾಯ ಹಾಕಿಸಿದ. ಸಾಯಂಕಾಲವಾದ ಕೂಡಲೇ ಕೆಲಸಗಾರರು ಕೂಲಿ ಕೇಳಿದರು. ಆಗ ಆತನು ಅವರ ಹತ್ತಿರವಿದ್ದ ಒಂದು ಗಡಾರಿಯನ್ನು ತೆಗೆದು ಕೊಂಡು ಯೋಗಿ ಕೊಟ್ಟ ರಸವನ್ನು ಅದಕ್ಕೆ ಲೇಪಿಸಿದ. ಕೂಡಲೇ ಅದು ಬಂಗಾರ ವಾಯಿತು. ಬಳಿಕ ಅದನ್ನು ವಿಕ್ರಯಿಸಿ, ಅವರಿಗೆಲ್ಲಾ ಕೂಲಿ ಹಂಚಿಕೊಟ್ಟ.

ಕೆಲವು ದಿನಗಳಿಗೆಲ್ಲಾ ಅಲ್ಲಿ ಒಂದು ಭಾರಿ ಕೋಟೆ ಎದ್ದಿತು. ಅದರ ಮುಂದೆ ಭೂತ ರಾಜನ ಕೋಟೆ ತೀರಾ ಸಣ್ಣದಾಗಿ ಕಾಣಿಸು ತಿತ್ತು. ಆದುದರಿಂದ ಭೂತರಾಜನಿಗೆ ಸೋದ ರಳಿಯನೆಂದರೆ ಅಸೂಯೆ ಜನಿಸಿತು. ಕೂಡಲೇ ತನ್ನ ಸೈನ್ಯವನ್ನು ಸಂಗಡ ಕರೆದುಕೊಂಡು ಹೋಗಿ ಸೋದರಳಿಯನ ಕೋಟೆಯ ಮುಂದೆ ನಿಂತು "ನನ್ನ ಜಾಗದಲ್ಲಿ ಈ ಕೋಟೆ ಕಟ್ಟಿರುವೆಯಾದುದರಿಂದ ಇದು ನನ್ನದು. ಒಳ್ಳೇ ಮಾತಿನಲ್ಲಿ ಕೊಡುವಿಯೋ ಇಲ್ಲವೊ?" ಎಂದು ಗುಡುಗಿದ.

ದೇವರಾಜನ ಮಾತಿನಂತೆ ಆತನ ತಾಯಿ ಭೂತರಾಜನ ಹತ್ತಿರ ಬಂದು "ಇದೇನು ಅಣ್ಣಾ. ನಿನಗೂ, ನಿನ್ನ ಸೋದರಳಿಯನಿಗೂ, ಯುದ್ಧವೆಂದರೇನು? ನಿನಗೆ ಈ ಕೋಟೆಯ ಮೇಲೆ ಅಷ್ಟು ಮೋಜಾದರೆ ತೆಗೆದುಕೊ. ಎಲ್ಲಿ, ಮೊದಲು ನೀನು ಕಾಲು ತೊಳೆದುಕೊ. ನಿನ್ನ ಸೈನಿಕರಿಗೂ ಒಳಗೆ ಬರುವಂತೆ ಹೇಳು. ಊಟಮಾಡುವಿರಂತೆ" ಎಂದು ಹೇಳಿದಳು.

ಯಾವ ಗಲಾಟೆಯೂ ಇಲ್ಲದೆ ತನಗೆ ಕೋಟೆ ಲಭಿಸುವುದೆಂದು ಭೂತರಾಜನು ಸಂತೋಷಗೊಂಡ. ಸೋದರಮಾವನ ಸೈನಿ ಕರಿಗೆಲ್ಲಾ ದೇವರಾಜ ಎಲೆಹಾಕಿಸಿ, ಮೃಷ್ಟಾನ್ನ ಭೋಜನ ಮಾಡಿಸಿದ. ಅವರು ಕೈತೊಳೆದುಕೊಂಡು ಬರುವಷ್ಟರಲ್ಲಿ ಮಣೆಗಳ

ಮೇಲೆ ಒಂದೊಂದು ಜೊತೆ ಪಂಚೆ ಇಡಿಸಿದ. ಪ್ರತಿಯೊಬ್ಬರೂ ಪಂಚೆ ಉಟ್ಟುಕೊಂಡು, ಅಂಗವಸ್ತ್ರ ಮೇಲೆ ಹಾಕಿಕೊಳ್ಳಲು ಹೋದರು. ಆದರೆ ಅದರ ಒಂದು ಅಂಚಿಗೆ ಏನೋ ಕಟ್ಟಿರುವಂತೆ ತೋರಿತು. ಗಂಟುಬಿಚ್ಚಿ ನೋಡಿದರು. ಒಂದೊಂದು ನೂರು ವರಹಗಳಿವೆ! "ಇವು ಏಕೆ" ಎಂದರು ಅವರು ಆಶ್ಚರ್ಯ ಚಕಿತರಾಗಿ. ಆಗ ದೇವರಾಜನು "ಬರುವ ತಿಂಗಳ ಸಂಬಳ ಮುಂಗಡವಾಗಿ ಕೊಟ್ಟಿದ್ದೇನೆ" ಎಂದ.

"ನಮ್ಮ ಸಂಬಳ ನೀವು ಕೊಡುವುದೆಂದರೇನು? ಅಲ್ಲಿ, ನಮ್ಮ ಸಂಬಳ ತಿಂಗಳಿಗೆ ಕೇವಲ ಹತ್ತು ವರಹಗಳು. ನೀವಾದರೋ ನೂರು ಕೊಟ್ಟಿದ್ದೀರಿ"

"ಪರವಾಯಿಲ್ಲ ತೆಗೆದು ಕೊಳ್ಳಿ. ನಾವೆಲ್ಲರೂ ಕೆಲವು ದಿನಗಳಲ್ಲೇ ಜಸಲ್ಮೀರು ಕೋಟೆಯನ್ನು ವಶಪಡಿಸಿ ಕೊಳ್ಳಬೇಕು"

ದೇವರಾಜನ ಮಾತಿಗೆ ಎಲ್ಲರೂ ಸಂತೋಷದಿಂದ ಅದಕ್ಕೆ ಸಮ್ಮತಿಸಿದರು. ಈ ರೀತಿಯಾಗಿ ದೇವರಾಜನು ಲಂಚ ಕೊಟ್ಟು ತನ್ನ ಸೈನಿಕರನ್ನು ವಶಪಡಿಸಿಕೊಂಡನೆಂಬ ವಿಷಯ ತಿಳಿದು, ಭೂತರಾಜನು ಉರಿದುಬಿದ್ದ. "ದ್ರೋಹವೆಣಿಸುವಿರಾ?" ಎಂದು ತನ್ನ ಸೈನಿಕರನ್ನು ಗದರಿಸಿದ.

"ಈತನು ಕಷ್ಟಪಟ್ಟು ಕಟ್ಟಿಸಿಕೊಂಡ ಈ ಕೋಟೆಯನ್ನು ಕಿತ್ತುಕೊಳ್ಳಲು ಯತ್ನಿಸುವುದು ದ್ರೋಹವಲ್ಲದೆ ಮತ್ತೇನು" ಎಂದು ಎದುರುಬಿದ್ದರು ಸೈನಿಕರು. ಮತ್ತೇನೂ ಮಾಡಲಾರದೆ ಭೂತರಾಜನು ಕೂಡಲೇ ಕುದುರೆ ಹತ್ತಿ ಅರಮನೆಗೆ ಹೊರಟುಹೋದ.

ಆ ಸೈನ್ಯದೊಂದಿಗೆ ಮತ್ತಷ್ಟು ಸೈನ್ಯ ಜಮಾವಣೆ ಮಾಡಿ, ಜಸಲ್ಮೀರು ಕೋಟೆಗೆ ಮುತ್ತಿಗೆಹಾಕಿ, ಶತ್ರುಗಳನ್ನು ಓಡಿಸಿ, ಆದನ್ನು ತನ್ನ ವಶಪಡಿಸಿಕೊಂಡ ದೇವರಾಜ.

ಇದಿಷ್ಟಕ್ಕೂ ಕಾರಣ ಯೋಗಿಯ ಅಂಗವಸ್ತ್ರವಾದುದರಿಂದ ಅಂದಿನಿಂದ ದೇವರಾಜನ ಸಂತತಿಯವರು ಪಟ್ಟಾಭಿಷೇಕದ ಸಮಯದಲ್ಲಿ ಅಂಗವಸ್ತ್ರವನ್ನು ಭುಜದಮೇಲೆ ಧರಿಸುವದು ಪದ್ಧತಿ ಆಯಿತು.






ಮಾಂತ್ರಿಕ ನೊಬ್ಬನು ಜೀವನ ನಿಕ್ಕಸ
ಯಂತ್ರ ಬೊಂಬೆಗಳ ಮಾಡಿದನು.

ಡ್ರಾಯಿಂಗ್ ರೂಮಲಿ ಕುರ್ಚಿಗಳಲ್ಲಿ
ಠೀವಿಯಲವುಗಳ ನಿರಿಸಿದನು.

ಕೈಯಲಿರುವ ಆ ಪತ್ರಿಕೆ ನೋಡುತ
ಶಿರಃಕಂಪನವ ಮಾಡುವುದೊಂದು
ಬಾಲ ಬಾಲೆಯರು ನಮಸ್ಕರಿಸಿದರೆ
ಭಲೇ ಸಲಾಮನು ಹೊಡೆಯುವುದೊಂದು.



ಒಂದೇ ವಿಧದಲಿ ತಲೆ ವಾಗಿಸುವಾ
ಬೊಂಬೆಗಳೆಲ್ಲರು ನೋಡಿದರು.

ನಿಜ ಮನುಷ್ಯನೋ ಬೊಂಬೆಯೊ ತಿಳಿಯದೆ
ತಮ್ಮೊಳು ಚರ್ಚೆಯ ಮಾಡಿದರು.

ಲೀಲಾ, ಲಾಲೀ ಎಂಬವ ರಿಬ್ಬರು
ಇದರ ಪರೀಕ್ಷೆಗೆ ತೊಡಗಿದರು
ಆಟದ ಬಿಡುವಿನ ದಿನದಲಿ ಎಲ್ಲರು
ಆಟಪಾಟದಲಿ ಇರುವಾಗ
ಮಾಂತ್ರಿಕನು ಮನೆಗೆ ಬೀಗವ ಹಾಕಿ
ಕೂಟ ಕೂಡಿಸಲು ಹೋದಾಗ,

ಕೂಟದಿ ಆತನು ಮಾತಾಡುತ್ತಿರೆ
ಲೀಲಾ ಆತನ ಬಳಿಯಲ್ಲಿದ್ದು,

ಜೇಬಿಂ ಬೀಗದಕೈಯನು ಜಾರಿಸಿ
ಜಾರಿ ಹೋದಳಲ್ಲಿಂದೆದ್ದು.

ಒಬ್ಬಳೆ ಮಾಂತ್ರಿಕನಾ ಮನೆಹೊಕ್ಕು
ಬೊಂಬೆಗಳನೆಲ್ಲ ನೋಡಿದಳು.

ಅಷ್ಟರಲ್ಲಿ ಆ ಮಾಂತ್ರಿಕ ಬರುತಿಹ
ಶಬ್ದವನ್ನವಳು ಕೇಳಿದಳು.

ಎತ್ತ ಹೋಗಲೂ ದಾರಿಯ ತೋರದೆ
ಮಾಯವಾಗಲೂ ಮಾರ್ಗವ ಕಾಣದೆ
ಸಾಲೂ ಬೊಂಬೆಗಳೊಂದಿಗೆ ತಾನೂ
ಬೊಂಬೆಯಂತೆಯೇ ಕುಳಿತುಬಿಟ್ಟಳು.

'ಬೀಗಹಾಕಲಿಕೆ ಮರೆತೆನೆ?' ಎನುತ
ತೆರೆದ ಮನೆಯೊಳಗೆ ಹೊಕ್ಕಾ ಮಾಂತ್ರಿಕ
ಎರಡೂ ಬದಿಗಳ ಪರಿಕಿಸಿ ನೋಡುತ,
ಸರಿಯಾಗಿದೆಂದು ತಲೆಯೊಲಿಯುತ್ತ,
ಬಹಳಾನಂದವ ಹೊಂದಿದನು.

ಬೊಂಬೆಗಳಾ ಬಳಿ ಸುತ್ತೂ ತಿರುಗುತ
ಗಟ್ಟಿಸಿ ಮಂತ್ರವ ಹೇಳಿದನು.

ನೋಡುತಲಿರಲು ಲೀಲಾ ಮೆಲ್ಲನೆ
ತಲೆ ತಿರುಗಿಸಲಾ ಮಾಂತ್ರಿಕನು
ತನ್ನ ಮಂತ್ರಗಳ ಮಹಿಮೆಯಿದೆಂದೇ
ತನ್ನಲಿ ತಾನೇ ಉಬ್ಬಿದನು.

ಗೋಡೆಯೇರಿಯಾ ಕಿಟಕಿಯತೂರಿ
ಮೆಲ್ಲ ಬಂದನಾ ಲಾಲೀ ಒಳಗೆ.

ಲೀಲೆಗೆ ಕಾಣಿಸುವಂತೆ ಬಳಿಯ ಪಡ
ಸಾಲೆಯಲೇ ನಿಂತಿದ್ದನು ಲಾಲಿ.

ಮಂತ್ರವು ಜೋರಾದಂತೆ ಈ ಬೊಂಬೆ
ಯಂತ್ರದ ಕದಲಿಕೆ ಜೋರಾಯ್ತು.

ಇದ ನೋಡುತ್ತಾ ಮಾಂತ್ರಿಕ ತನ್ನಲಿ
ಮುದದಿಂದುಬ್ಬುವುದೂ ಜೋರಾಯ್ತು.

ಕಿರುನಗು ನಗುತ ತಲೆ ಕೊಂಕಿಸುತ
ಕರಗಳನೆತ್ತುತ ಕಣ್ಣು ತಿರುಗಿಸುತ
ಮೆಲ್ಲನೇಳುವಾ ಬೊಂಬೆಯ ಕಂಡು,
ತನ್ನ ಮಹಿಮೆಗೇ ತಾಬೆರಗು ಗೊಂಡು,
ಮಾಂತ್ರಿಕನಂತೇ ಮೈಮರೆತಿದ್ದ.

ಸಾಕ್ಷಾತ್ ಕನ್ಯೆಯ ಹಾಗಾ ಬೊಂಬೆ
'ಲಾಲೀ' ಎನ್ನುತ ಕೂಗಿತು!
ಒಡನೆಯೆ ಬಾಣದ ಹಾಗೇ ಅಲ್ಲಿಗೆ
ಲಾಲೀ ಓಡುತ ಸರ್ರನೆಬಂದು
ಲೀಲೆಯ ಕೈಯನು ಹಿಡಿದನು ಚಟ್ಟನೆ
ಓಡಿದರವರಿಬ್ಬರೂ ಸಟ್ಟನೆ!
ಮಾಂತ್ರಿಕನೇನೂ ತಿಳಿಯದೆ ಅಲ್ಲೇ
ಬೆಪ್ಪು–ಬೆರಗು–ಬೆಜ್ಜರು ಬಿದ್ದ!!



# ಅದೂ — ಇದೂ




ಮಕ್ಕಳಿರಾ!— ಈ ಚಿತ್ರದಲ್ಲಿ ಎರಡು ಮೋಟಾರುಗಳಿವೆ. ಹೌದೇ? ಅವು ಒಂದರ ಎದುರಾಗಿ ಇನ್ನೊಂದು ಬರುತ್ತಿದೆ. ಆದರೆ ಅವೆರಡೂ ಡಿಕ್ಕಿ ಹೊಡೆದಾವೇನೋ ಎಂದಲ್ಲವೇ ನಿಮ್ಮ ಭಯ! ಹೆದರಬೇಡಿ. ನಾನು ಹೇಳಿದಂತೆ ಮಾಡಿದರೆ ಸರಿ. ನೋಡಿ, ಎರಡು ಮೋಟಾರುಗಳನ್ನು ನಿಧಾನವಾಗಿ ನೋಡುತ್ತಿದ್ದು ನಿಮ್ಮ ದೃಷ್ಟಿಯನ್ನು ಮೂಗಿನ ನೇರಕ್ಕೆ ತೆಗೆದುಕೊಂಡು ಬನ್ನಿ. ಅಷ್ಟೇ. ಎಲ್ಲಿ ಮಾಡಿ ನೋಡೋಣ! ಮೋಟಾರುಗಳು ಎರಡೂ ಅವಕ್ಕವೇ ಜಾಗ್ರತೆಯಾಗಿ ತಪ್ಪಿಸಿಕೊಂಡು ಹೋಗುತ್ತಿವೆಯಲ್ಲವೆ!

---



ಇದೊಂದು ಕಾಡು ಹಂದಿ. ಇದಕ್ಕೆರಡು ಉದ್ದವಾದ ದಂತಗಳಿವೆ. ಅವು ತಲೆಯಕಡೆ ಬಾಗಿ ಬೆಳೆಯುತ್ತವೆ. ಗೆಡ್ಡೆಗೆಣಸನ್ನು ಅದರಿಂದ ಅಗೆದು ತಿನ್ನುವುದರಿಂದ, ಅವು ಆಗಾಗ ಸವೆದು ಹೋಗುತ್ತಿರುತ್ತವೆ. ಹಾಗೆ ಸವೆಯದಿದ್ದರೆ ಅವು ಬೆಳೆದು ತಲೆಗೆ ಚುಚ್ಚಿಕೊಳ್ಳುವುದಲ್ಲದೆ ಅದರ ಮರಣಕ್ಕೂ ಕಾರಣವಾಗಬಹುದು.

★

ಇದು ನೀಲಿ ತಿಮಿಂಗಲ. ಪ್ರಪಂಚದಲ್ಲಿರುವ ತಿಮಿಂಗಲಗಳಲ್ಲೆಲ್ಲಾ ಅಪಾರ ಆಕೃತಿಹೊಂದಿದೆ. ಇದರ ಉದ್ದ 100 ಅಡಿ. ಇದು ಮೀನಿನಜಾತಿಗೆ ಸೇರಿದುದೆಂದು ಬಹಳ ಜನ ಹೇಳುವರು. ಅದು ಸರಿಯಲ್ಲ. ಇದು ಮೊಲೆಯುಣ್ಣುವ ಪ್ರಾಣಿ· ಅಂದರೆ ಹಾಲಿತ್ತು ಬೆಳೆಯುವ ಜಂತು. ಇದರ ನಿವಾಸ ಉತ್ತರ ಅಟ್ಲಾಂಟಿಕ್ ಸಮುದ್ರ.



# ಸರಳಜೀವಿ

ಪೂರ್ವಕಾಲದಲ್ಲಿ ಸಂಗ್ರಾಮಸಿಂಹನೆಂಬ ಒಬ್ಬ ರಾಜನಿದ್ದ. ಆತನು ರಾಜ್ಯಾದಾಯದಲ್ಲಿ ಸ್ವಲ್ಪ ಭಾಗವನ್ನು ಮಾತ್ರ ತನ್ನ ಸ್ವಂತಕ್ಕೆ ಖರ್ಚುಮಾಡುತ್ತಿದ್ದ. ಉಳಿದುದನ್ನು ಧಾರಾಳವಾಗಿ ಪ್ರಜೆಗಳ ಸುಖ ಸೌಕರ್ಯಗಳಿಗೋಸ್ಕರವಾಗಿ ವಿನಿಯೋಗಿಸುತ್ತಿದ್ದ.

ಕೆಲವು ಗ್ರಾಮಗಳಿಂದ ವಸೂಲಾಗುವ ಕಂದಾಯವನ್ನು ಮಾತ್ರ ತನ್ನ ಸ್ವಂತ ಖರ್ಚಿಗಾಗಿ ಬಳಸಿ, ಒಂದೊಂದು ಗ್ರಾಮದಿಂದ ಬರುತ್ತಿದ್ದ ಆದಾಯವನ್ನು ಒಂದೊಂದು ಖರ್ಚಿನ ಬಾಬತಿಗಾಗಿ ಉಪಯೋಗಿಸುತ್ತಿದ್ದ. ಅಂದರೆ ಒಂದು ಊರಿನ ಕಿಸ್ತುಹಣ ಭೋಜನಕ್ಕಾಗಿ, ಇನ್ನೊಂದು ಗ್ರಾಮದಿಂದ ಬರುವುದನ್ನು ಉಡುಪುಗಳಿಗಾಗಿ, ಮತ್ತೊಂದು ಹಳ್ಳಿಯ ಆದಾಯವನ್ನು ರಾಣೀವಾಸದವರಿಗಾಗಿ, ಹೀಗೆ ಖರ್ಚು ಮಾಡುತ್ತಿದ್ದ.

ಬೆಳೆಯಾಗದಿದ್ದರೆ ಆದಾಯ ಕಡಿಮೆಯಾಗುವುದಿಲ್ಲವೇ? ಆಗ ಆದಾಯಕ್ಕೆ ತಕ್ಕಂತೆ ಖರ್ಚು ಮಾಡಿಕೊಳ್ಳುತ್ತಿದ್ದನೇ ಹೊರತು ಆ ಖರ್ಚಿಗಾಗಿ ಪ್ರಜೆಗಳಿಗೆ ಮೀಸಲಾದ ಹಣವನ್ನು ಮಾತ್ರ ಎಂದೂ ಮುಟ್ಟುತ್ತಿರಲಿಲ್ಲ. ಇದು ಅವನು ತಪ್ಪದೆ ನಡೆಸಿಕೊಂಡು ಬರುತ್ತಿದ್ದ ನಿಯಮ.

ಒಂದು ದಿನ ರಾಜಸಭೆ ನೆರೆದಿರುವಾಗ ಒಬ್ಬ ಹೊಗಳುಭಟ್ಟನು ಹಾಜರಾದ. ತನ್ನ ಕವಿತ್ವದಿಂದ ರಾಜನ ಮೆಚ್ಚಿಗೆಗೆ ಪಾತ್ರನಾದ. ಸ್ವಂತ ಖರ್ಚಿಗಾಗಿ ನಿಗದಿಮಾಡಿರುವ ಗ್ರಾಮಗಳ ಹೆಸರು ಹೇಳಿ ಅವುಗಳಲ್ಲಿ ಮಾನ್ಯ ಕೇಳುವಂತೆ ಹೇಳಿದ, ಆ ರಾಜ.

ರಾಜನ ಭೋಜನಕ್ಕಾಗಿದ್ದ ಆ ಹಳ್ಳಿಯಲ್ಲಿ ಮಾನ್ಯ ಕೇಳಿಕೊಂಡ ಆ ಭಟ್ಟ. ಕೂಡಲೇ ಅವನಿಗೆ ರಾಜನು ದಾನಪತ್ರ ವೊಂದನ್ನು ಬರೆಯಿಸಿ ಕೊಟ್ಟ.

ರಾಜನಿಗೆ ಮೊಸರಿನಲ್ಲಿ ಸಕ್ಕರೆ ಕಲೆಸಿ ತಿನ್ನುವುದು ಅಭ್ಯಾಸ. ಮಾರನೇಯ ವರ್ಷ ಉಗಾದಿ ದಿವಸ ಅಡಿಗೆಯವನು ಸಕ್ಕರೆ ಸೇರಿಸದೆ ರಾಜನಿಗೆ ಮೊಸರನ್ನು ಬಡಿಸಿದ. ರಾಜನು ಅದನ್ನು ಬಾಯಿಗಿಟ್ಟು ನೋಡಿ

ವೆಂಕಟೇಶ ಕುಲಕರಣಿ, ಧಾರವಾಡ




“ಸಕ್ಕರೆ ಮರೆತೆಯಲ್ಲಯ್ಯಾ, ಹಾಕಿ ಕಲಸಿತಾ” ಎಂದು ಹೇಳಿದ.

ಅಡಿಗೆಯವನು ವಿನಯದಿಂದ “ಮಹಾಪ್ರಭೂ, ಮರೆತಿಲ್ಲ. ತಮ್ಮ ಭೋಜನಕ್ಕಾಗಿ ಏರ್ಪಟ್ಟ ಗ್ರಾಮದಲ್ಲಿ ಸಕ್ಕರೆಗಾಗಿ ನಿಗದಿಯಾಗಿದ್ದ ಸ್ಥಳವನ್ನು ತಾವು ಯಾರಿಗೋ ದಾನ ಮಾಡಿದಿರಂತೆ. ಅದರಿಂದಾಗಿ ತಮಗೆ ಸಕ್ಕರೆ ಇಲ್ಲವೆಂದು ಮಂತ್ರಿಗಳು ಹೇಳಿದರು” ಎಂದು ಬಿನ್ನವಿಸಿಕೊಂಡ.

ಅದಕ್ಕೆ ರಾಜನು “ಹೌದು. ಆ ಸ್ಥಳವನ್ನೇ ಇರಬೇಕು ಭಟ್ಟನಿಗೆ ಕೊಟ್ಟಿರುವುದು. ಇನ್ನುಮುಂದೆ ಸಕ್ಕರೆ ಬಿಟ್ಟುಬಿಡುತ್ತೇನೆ” ಎಂದು ಅಂದಿನಿಂದ ಸಕ್ಕರೆ ಉಪಯೋಗಿಸುವ ಪದ್ಧತಿಯನ್ನು ತಪ್ಪಿಸಿದ.

ಬಟ್ಟೆಬರೆ ವಿಚಾರದಲ್ಲೂ ರಾಜನು ಮಿತವಾಗಿ ಖರ್ಚುಮಾಡಿಕೊಳ್ಳುತ್ತ, ಅದಕ್ಕಾಗಿ ಪ್ರತ್ಯೇಕಿಸಲ್ಪಟ್ಟ ಗ್ರಾಮದ ವರಮಾನದಲ್ಲೇ ಎಲ್ಲವನ್ನೂ ಸರಿಗಟ್ಟುವನು.

ಸಾಮಂತರಾಜರ ಪೈಕಿ ಜಸವಂತಸಿಂಹನಿಗೂ ಸಂಗ್ರಾಮಸಿಂಹನಿಗೂ ತುಂಬಾ ಸಲಿಗೆ. ಜಸವಂತಸಿಂಹ ಮಹಾರಾಜರ ಪೋಷಾಕು ನೋಡಿದ. ಅದು ತುಂಬಾ ಬಿಗುವಾಗಿ, ಹಳೆಯ ರೀತಿಯವಾಗಿರುವಂತೆ ಜಸವಂತಸಿಂಹನಿಗೆ ತೋರಿಬಂತು.

ಸಮಯ ನೋಡಿ ಒಂದು ದಿವಸ ತನ್ನ ಅಭಿಪ್ರಾಯವನ್ನು ಮಹಾರಾಜರಿಗೆ ಸೂಚಿಸಿದ. “ತಾವು ಹೊಸ ಮಕ್‌ಮಲ್ ಪೋಷಾಕನ್ನು ಧರಿಸಿದರೆ ನಾವುಸಹ ತಮ್ಮನ್ನು ಅನುಕರಿಸಬಹುದು” ಎಂದು ಬಿನ್ನವಿಸಿಕೆಂಡ.

ಜಸವಂತನು ಹೇಳುವುದನ್ನೆಲ್ಲಾ ಶ್ರದ್ಧೆಯಿಂದ ಕೇಳಿ ಸಂಗ್ರಾಮಸಿಂಹನು: “ಸರಿ, ಹಾಗೆಯೇ ಮಾಡುತ್ತೇನೆ” ಎಂದು ಆ ಸಾಮಂತನನ್ನು ಸಂತೋಷಗೊಳಿಸಿದ.

ನಡೆದಸಂಗತಿಯನ್ನು ಜಸವಂತಸಿಂಹನು ಇತರ ಸಾಮಂತರಿಗೆ ತಿಳಿಸಲು ತಾವು ಇನ್ನು ಮೇಲೆ ಬಣ್ಣಬಣ್ಣದ ಮಿರುಗುವ ಬಟ್ಟೆಗಳನ್ನು ಧರಿಸಬಹುದೆಂದು ಅವರೆಲ್ಲಾ ತುಂಬಾ ಸಂತೋಷಪಟ್ಟರು.

ಮಾರನೇ ದಿನ ಬೆಳಗ್ಗೆ ಜಸವಂತಸಿಂಹನು ರಾಜಧಾನಿಯಲ್ಲಿ ಉತ್ತಮ ಚಿಂಪಿಗನು ಯಾರೆಂದು ಯೋಚಿಸುತ್ತಿದ್ದ.

ಆಗ ಆತನಬಳಿಗೆ ಸಂಗ್ರಾಮಸಿಂಹನ ದೂತನು ಬಂದು, "ಸ್ವಾಮಿ, ನಿಮ್ಮ ಗ್ರಾಮಗಳಲ್ಲಿ ಎರಡನ್ನು ಮಹಾರಾಜರು ತಮ್ಮ ವಶಪಡಿಸಿಕೊಂಡಿದ್ದಾರೆ" ಎಂದು ಹೇಳಿ ಹೊರಟುಹೋದನು. ಜಸವಂತನ ಎದೆ ಜಲ್ಲೆಂದಿತು. "ನನ್ನ ಗ್ರಾಮಗಳನ್ನು ಸೇರಿಸಿಕೊಳ್ಳಲು ನಾನು ಮಾಡಿದ ಅಪರಾಧವೇನು" ಎಂದು ಬಹಳವಾಗಿ ಯೋಚಿಸತೊಡಗಿದ.

ಎಷ್ಟೇ ಯೋಚಿಸಿದರೂ ಅದರ ಕಾರಣ ತಿಳಿಯಲಿಲ್ಲ. ಮಹಾರಾಜರು ಯಾವ ಕೆಲಸ ಮಾಡಿದರೂ ಕಾರಣವಿಲ್ಲದೆ ಮಾಡುವುದಿಲ್ಲ. ಅದೇನೋ ನೇರವಾಗಿ ಹೋಗಿ ತಿಳಿದುಕೊಳ್ಳುವುದು ಉಚಿತವೆಂದು, ಸಂಗ್ರಾಮಸಿಂಹನ ಹತ್ತಿರ ಬಂದು "ಪ್ರಭೂ ನಿಮ್ಮ ಅನುಗ್ರಹ ಕಡಿಮೆಯಾಗಲು ನಾನು ಮಾಡಿದ ಅಪರಾಧವೇನೆಂಬುದನ್ನು ತಿಳಿಸುವಿರಾ?" ಎಂದು ಬಹುವಿನಯವಾಗಿ ಕೇಳಿದ.

ಸಂಗ್ರಾಮಸಿಂಹನು "ನೀನೇನೂ ತಪ್ಪು ಮಾಡಿಲ್ಲ. ನಿನ್ನ ಗ್ರಾಮುಗಳನ್ನು ಆಕ್ರಮಿಸಿಕೊಂಡ ಕಾರಣವೇನೆಂದರೆ, ನಿನ್ನೆ ರಾತ್ರಿ ನನ್ನ ಲೆಕ್ಕಗಳನ್ನು ಪರಿಶೀಲಿಸಿದೆ. ನನ್ನ ಗ್ರಾಮಗಳ ಆದಾಯದ ಪ್ರತಿ ರೂಪಾಯಿಗೂ ಅತ್ಯಗತ್ಯವಾದ ಖರ್ಚಿದೆ. ನೀನು ಹೇಳಿದಂತೆ ಮಕಮಲ್ ಬಟ್ಟೆಯ ಉಡುಪುಗಳನ್ನು ಹೊಲಿಸಿಕೊಳ್ಳಲು ಉಳಿತಾಯ ಯಾವುದರಲ್ಲೂ ಕಾಣಲಿಲ್ಲ. ಪೋಷಾಕುಗಳಿಗಾಗಿ ಪ್ರಜೆಗಳಸ್ವತ್ತು ಉಪಯೋಗಿಸಲು ನನಗಿಷ್ಟವಿಲ್ಲ.




ಹೊಸ ತೊಡಿಗೆಯ ವಿಚಾರ ಬಿಡೋಣವೆಂದರೆ ಪರಮಾಪ್ತನಾದ ನಿನ್ನ ಸಲಹೆಯನ್ನು ತಿರಸ್ಕರಿಸಿದಂತಾಗುವುದು; ನೀನು ಅಲ್ಪತನವೆಂದೀಯೇ! ಆದುದರಿಂದ ಹೊಸ ಉಡುಗೆ ತೊಡುಗೆಗಳಿಗಾಗುವ ಖರ್ಚಿಗಾಗಿ ನಿನ್ನ ಗ್ರಾಮುಗಳಲ್ಲಿ ಎರಡನ್ನು ತೆಗೆದುಕೊಳ್ಳಬೇಕಾಯಿತು" ಎಂದು ವಿವರಿಸಿ ಹೇಳಿದ.

ಜಸವಂತಸಿಂಹನಿಗೆ ತನ್ನ ಕಾಲ ಮೇಲೆ ತಾನೇ ಕಲ್ಲು ಹಾಕಿಕೊಂಡಂತಾಯಿತು. "ಪ್ರಭೂ, ಈಗ ತಾವು ಧರಿಸಿರುವ ತೊಡಿಗೆ ಚೆನ್ನಾಗಿದೆ. ಇವನ್ನು ಬದಲಾಯಿಸಬೇಕಾಗಿಲ್ಲ. ನನ್ನ ಗ್ರಾಮುಗಳನ್ನು ನನಗೆ ಕೊಟ್ಟುಬಿಡಿ" ಎಂದು ಅಂಗಲಾಚಿದ. "ಸರಿ, ಹಾಗಾದರೆ" ಎಂದು ಸಂಗ್ರಾಮಸಿಂಹನೆಂದ.



ಎ. ನರಸಿಂಹರಾವ್ - ಸಿಕಿಂದ್ರಾಬಾದ್

## ಕೊ ಕ್ಕೊ ಕೋ ಕೋ !

ಕಾಲಿನಿಂದ ಕೆದ್ಕೀ ಕೆದ್ಕೀ
ಕೊಕ್ಕಿನಿಂದ ಕುಕ್ಕೀ ಕುಕ್ಕೀ
ಸಿಕ್ಕಿತೊಂದು ಚಿಕ್ಕ ಅಕ್ಕಿ
ಗುಳ್ಕ ನುಂಗಿ ಹೊಟ್ಟೆಗಿಕ್ಕಿ
ಕೊಕ್ಕೊ ಕೋಕೋ !
ಹೇಟೇ ಹಿಂದೆ ಹೋಗೀ ಬಾಗಿ
ಬಣ್ಣ ಬೆಡಗು ಬೀರ ತೋರಿ
ಹೆಣ್ಣು ಹೇಟೇ ಕಣ್ಣ ಸೆಳೆದು
ಚೆನ್ನ ಗಂಡ ಬೀರ ಹುಂಜ
ಕೊಕ್ಕೊ ಕೋಕೋ !
ಹೇಟೇ ಅತ್ತ ಹೆಕ್ಕುತಿತ್ತು
ಮರಿಗ ಳೆಲ್ಲ ಚೆದರಿಸುತ್ತು
ಹಾರೋ ಹದ್ದು ಕಂಗೆ ಬಿತ್ತು
ಹುಂಜ ಬೇಗ ಎತ್ತಿ ಕತ್ತು

ಕೊಕ್ಕೊ ಕೋಕೋ !
ಕೋಳೀ ಕುಲದಾ ಕಾವ್ಲುಗಾರ !
'ಕೋಳೀಕಟ್ಟಾ' ಕಾದೋ ಧೀರ !
ಊರಿಗೆಲ್ಲ ಇವ ಗಡಿಯಾರ !
ಅಕ್ಕೋ ಬೆಳಗಾಯ್ತ ಜ್ಕೋ ಊರ !
ಕೊಕ್ಕೊ ಕೋಕೋ !
ಪುಕ್ಕ ಬಡೆದು ಮತ್ತು ಕೂಗು,
ಕೊಕ್ಕೊ ಕೋಕೋ !!

—" ಪುಟ್ಟ "

## ನ ನ್ ತ ಂ ಗಿ

ಆಡುತ ಪಾಡುತ ನಲಿನಲಿದಾಡುತ
ಬರುತಿರುವವಳೇ ನನ್ ತಂಗಿ
ಅರೆಬಿರಿದರಳಿದ ಹೂವಿನ ತೆರದಲಿ
ನಗುತಿರುವವಳೇ ನನ್ ತಂಗಿ.
ಚಿಂತೆಯನೋಡಿಸಿ ಹರುಷವನುಕ್ಕಿಸಿ
ಜಾರುವ ಜಾಣೆಯೆ ನನ್ ತಂಗಿ
ಬೆಂಗಡೆ ಬರುತಲಿ ಕಂಗಳ ಮುಚ್ಚುತ
"ನಾನಾರ್?" ಎನುವಳು ನನ್ ತಂಗಿ.
ಹಿರಿಯರು ಹೇಳಿದ ಕೆಲಸಗಳೆಲ್ಲವ
ಮಾಡಲು ತಪ್ಪಳು ನನ್ ತಂಗಿ
ಓದುತ ಬರೆಯುತ ಕೇಳುತ ತಿಳಿಯುತ
ಬುದ್ಧಿಯ ಕಲಿವಳು ನನ್ ತಂಗಿ.
"ಶ್ರೀರಾಮನ ಕಥೆ, ಬಾಪೂಜಿಯ ಕಥೆ
ಹೇಳಿರಿ" ಎನುವಳು ನನ್ ತಂಗಿ
"ಸೀತಾ ಸಾವಿತ್ರಿಯು ನಾನಾಗುವೆ
ಖಂಡಿತ" ಎನುವಳು ನನ್ ತಂಗಿ.
ಆಟದ ಮಂಗಿಯು ಕೂಟದ ರಂಗಿಯು
ನಗಿಸುವ ನಲಿಸುವ ನನ್ ತಂಗಿ
ಇಂದೂ ನಾಳೆಯು ಮನೆಯನು ಬೆಳಗುವ
"ಲಕ್ಷ್ಮಿ"ಯೆ ಮುದ್ದಿನ ನನ್ ತಂಗಿ,

—ಪ. ಸೀತಾರಾಮಭಟ್ಟ; ಮಿತ್ತಬೈಲ್

# ಸವಿ—ಸ್ವಾರಸ್ಯ
## ವ ಶ್ರೀ

ಒಬ್ಬ ಬಿಕ್ಷುಕನು ಒಂದು ಮನೆಗೆ ಹೋದ. ಆ ಮನೆಯ ಯಜಮಾನನು ಪರಮ ಲೋಭಿ. ಬಿಕ್ಷುಕನು ಕೆಲವು ಪದಗಳನ್ನು ಹಾಡಿದ. 'ನನಗೂ ಗೊತ್ತಿದೆ' ಎಂದು ಮನೆಯಾತನೂ ಹಾಡಿದ. ಬಿಕ್ಷುಕ ಕೆಲವು ಶ್ಲೋಕಗಳನ್ನು ಹೇಳಿದ. ಯಜಮಾನನೂ ಸಹ ಹೇಳಿದ. ಬಿಕ್ಷುಕ ಇಂದ್ರಜಾಲವನ್ನು ಮಾಡಿದ. ಯಜಮಾನನೂ ಸಹ ಅವುಗಳನ್ನು ಮಾಡಿ ತೋರಿಸಿದ. ಬಿಕ್ಷುಕನಿಗೆ ಬೇಸರ ವಾಯಿತು. "ಅಯ್ಯಾ ನೀವು ಸಮಸ್ತ ವಿದ್ಯೆಗಳನ್ನೂ ಕಲಿತಿರುವಿರಿ. ಬಹಳ ಸಂತೋಷವಾಯಿತು. ಆದರೆ ನಿಮ್ಮ ಕೈಯಲ್ಲಿ ಆಗದಿರುವುದು ಒಂದಿದೆ. ನಾನು ಬಿಕ್ಕೆಬೇಡುತ್ತೇನೆ, ನೀವೋ?" ಎಂದ. ಯಜಮಾನನು ನಾಚಿಕೆಗೊಂಡು, ಅವನಿಗೊಂದು ಕಾಸು ಹಾಕಿ ಕಳುಹಿಸಿದ.

—✧—

ಅತಿ ಗೌರವವಾದ ವೃತ್ತಿಗೆ ಪ್ರಪಂಚ ವಿಜ್ಞಾನಸಮಿತಿಯವರು ಒಂದು ಬಹುಮಾನ ಕೊಡುವುದಾಗಿ ಪ್ರಕಟಿಸಿದರು. ಪ್ರಭುಗಳೂ, ವೀರರೂ, ಪಂಡಿತರೂ ಸ್ಪರ್ಧೆಗೆ ನಿಂತರು. ಸಮಿತಿ ಪಂಡಿತರನ್ನು ಗೌರವಿಸಿತು. ಇದು ಅನ್ಯಾಯವೆಂದರು ಪ್ರಭುಗಳು. 'ಅಲ್ಲ. ರಾಜನಿಗೆ ತನ್ನ ರಾಜ್ಯದಲ್ಲಿ ಗೌರವ. ಪಂಡಿತರು ಎಲ್ಲಿಗೆ ಹೋದರೂ ಪೂಜಿಸಲ್ಪಡುವರು' ಎಂದಿತು ಸಮಿತಿ. 'ವೀರಪೂಜೆ ಸಾಮಾನ್ಯವಾದುದೇ?' ಎಂದು ಪ್ರಶ್ನೆ ಮಾಡಿದರು ಯೋಧರು. ಅದಕ್ಕೆ ಸಮಿತಿ ಹೇಳಿತು "ವೀರನಾದ ವೃದ್ಧನಿಗೆ ಗೌರವ ಕಡಿಮೆಯಾಗಬಹುದು. ಪಂಡಿತನು ವೃದ್ಧನಾದಷ್ಟೂ ಆತನಿಗೆ ಮನ್ನಣೆಯೂ ಮರ್ಯಾದೆಯೂ ಹೆಚ್ಚುವುದು."

—✧—

ಬಡವನೊಬ್ಬನು ತನ್ನ ಬುದ್ಧಿ ಚಾತುರ್ಯದಿಂದ ಐ. ಸಿ. ಎಸ್. ಪರೀಕ್ಷೆ ಪ್ಯಾಸುಮಾಡಿದ. ತನ್ನ ಬಂಧುವರ್ಗದವರು ಉನ್ನತ ಪದವಿಗಳಲ್ಲಿ ಇಲ್ಲದುದರಿಂದ ಅವರೆಂದರೆ ಆತನಿಗೆ ಒಂದು ಬಗೆಯ ತಿರಸ್ಕಾರ. ಇದನ್ನು ಕಂಡು ಬಂಧುಗಳೂ, ಸ್ನೇಹಿತರೂ ಆತನನ್ನು ಬಹಿಷ್ಕರಿಸಿದರು. ಆತನಿಗೆ ಬೇಸರಿಕೆಯುಂಟಾಗಿ, ಒಂದು ದಿನ ಆತನ ಮಿತ್ರನ ಹತ್ತಿರ ಹೋಗಲು ಆತನು "ಬ್ರಹ್ಮಾಂಡವಾದ ಆನೆಯನ್ನು ಕಟ್ಟಲು ಹುಲ್ಲಿನಿಂದ ಹಗ್ಗ ಹೊಸೆಯುತ್ತಾರೆ. ತೆನೆಯನ್ನು ಹೊತ್ತಿರಲು ಅದಕ್ಕೆ ಅಂಟಿರುವ ಹೊಟ್ಟೂ ತವುಡೂ ಅಗತ್ಯವಲ್ಲವೇ?" ಎಂದ. ಆ ಮಾತುಗಳ ಒಳಅರ್ಥವನ್ನು ಗ್ರಹಿಸಿ, ತನ್ನ ಬಂಧುಬಳಗದವರೊಂದಿಗೆ ಸಲಿಗೆಯಿಂದ ಇರಲಾರಂಭಿಸಿದ ಆ ಐ. ಸಿ. ಎಸ್. ಗಾರ.

## ಪರೀಕ್ಷೆ

ನಮ್ಮ ಪರೀಕ್ಷೆ ಸಮಾಪಿಸಿತು
ಕರದಲಿ ಪುಸ್ತಕ ಶೋಭಿಸಿತು
ಓದಲು ತೊಡಗಿದೆ ನಾನಿಂದು
ಅರಿಯದು ಒಂದೂ ನನಗಿಂದು.

ಪಾಠದ ಸಮಯದಿ ಆಡಿದೆನು
ಆಟದ ಯೋಚನೆ ಮಾಡಿದೆನು
ಪ್ರತಿಫಲವಿದುವೇ ನನಗಿಂದು
ಕಂಗಾಲಾಗಿಹೆ ನಾನಿಂದು.

ಲೆಕ್ಕದ ರೀತಿಯು ತಿಳಿದಿಲ್ಲ
ಇಂಗ್ಲಿಷ್ ಪದಗಳ ಕಲಿತಿಲ್ಲ
ಸಮಾಜ ಜ್ಞಾನದ ರಗಳೆಯನು
ಸಾಯನ್ಸಿನಂತೆಯೆ ಬಿಟ್ಟಿಹೆನು.

ನಾಲ್ಕೇ ದಿನಗಳು ಉಳಿದಿವೆಯೋ?
ನನ್ನ ಅವಸ್ಥೆಯ ಕೇಳುವಿರೆ!
'ಅಣ್ಣಾ! ಲೆಕ್ಕ ಕಲಿಸಣ್ಣಾ!
ಗೆಳೆಯಾ! ಕಲಿಸಿಂಗ್ಲೀಷನ್ನ!

ದೇವರನ್ನು ನಾ ಮರೆತಿದ್ದೆ
ಸಂಕಟ ಸಮಯದಿ ನಾನೆನೆದೆ!
'ದೇವನೆ! ನೀನೇ ದಾತಾರ!
ಪಾಸ್ ಮಾಡೆನ್ನನು ಉಪಕಾರ!'

ಭರದಲಿ ನಾ ಉರು ಹೊಡೆಯುವೆನು
ಮುಂದಕೆ ಜಾಗ್ರತೆ ವಹಿಸುವೆನು
ತಿಳಿಸುವೆ ಭಾವೀ ಫಲಿತಾಂಶ
ಕಾದಿರಿ! ಫೈಲೇ ಬಹು ಅಂಶ!
ಪಾಸಾಗ್‌ಬಿಟ್ರೆ ಅದೃಷ್ಟವಶ!

—ಕಲ್ಮಾಡಿ ಅನಂತಕೃಷ್ಣರಾವ್, ಕೋಟೆಕಾರ್

## ಪೋಕರಿ ಕಿಟ್ಟುವಿನ ಕಲ್ಪನೆ: ಶಾಲೆ

ಶಾಲೆಯೊಳೆಲ್ಲಾ ಲೆಕ್ಕದ ಪೆಟ್ಟು,
ಕನ್ನಡ ಮಾಸ್ತರ ಮಂಡೆಯು ಕುಟ್ಟು
ಪಾಠದ ಭರದಲಿ ನಾವೇ ಚಟ್ಟು
—ಇದು ನಮ್ಮದು ಶಾಲೆಯ ಗುಟ್ಟು!
—ಹೇಳಲು ಹೆದರಿಕೆ ಬಾಯ್ಬಿಟ್ಟು!!

ಲೆಕ್ಕದ ಮೇಸ್ತ್ರಿಗೆ ಅಂಗಡಿ ಭಾರಿ
ವ್ಯಾಪಾರದ ವ್ಯವಹಾರದ ಬ್ಯಾರಿ
ತನ್ನ ಅಂಗಡಿ ಲೆಕ್ಕವ ನೋಡಿ,
—ಮಂಡೆಯೊಳಗೆ ತುಂಬಿತು ಬೂದಿ!
—ಇದಕಿಂತಲು ಗುಣ-ಹೊರಬೀದಿ.

ನನ್ನನು ಕಂಡರೆ ಮಾಷ್ಟ್ರಿಗೆ ಸಿಟ್ಟು
ನಾನೆಂದರೆ ಪೋಕರಿಯಾ ಕಿಟ್ಟು
ಆಟದ ಬಯಲೆಡೆ ಕಣ್ಣನು ಬಿಟ್ಟು,
ಮನೆ ಕೆಲಸವೊ ನಕಲಿನ ಮುಟ್ಟು!
ಮಾಸ್ತರು ತಿಳಿದರು ಈ ಗುಟ್ಟು!!

ಇನ್ನು ಇನಸ್ಪೆಕ್ಟರರೋ? ಮಾರಿ!
ಹೋಟೆಲಿನಲ್ಲಿ ಸುಮ್ಮನೆ ಕೂರ್ರಿ,
ಪಾಪದ ಮಾಸ್ತರ ಗಂಟೆಲ ಹೀರಿ
ಹಿಂದಿರುಗುವರು ಸೈಕಲು ಏರಿ!
—ಆಯಿತು ಅವರ ದೊರೇಸ್ವಾರಿ!

ತಂಟೆಯೊಳಾಡಿದರಾಯಿತು ದಂಟೆ—
ತೆಗೆವರು, ತಿರುಗಿಸಿ ಶಾಲೆಯ ಗಂಟೆ
ಬಡಿವರು, ತಮಗಿಹ ವೇಳೆಯ ನೋಡಿ
ನಡೆಯುತಿಹುದು ಶಾಲೆಯ ಮೋಡಿ
—'ಕಲಿಯಿರಿ' ಎನ್ನುವ ಪದಹಾಡಿ.

—ಸೀ. ಹೊಸಬೆಟ್ಟು

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1954 ಮಾರ್ಚಿ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ:





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಜನವರಿ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.
ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು-26.

---

### ಫಿಬ್ರುವರಿ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ : ನೀರೇ ಮುಗಿಯದು

ಎರಡನೇ ಫೋಟೋ : ನೀರೇ ಸಾಲದು

ಕಳಿಸಿದವರು: ಯಂ. ಸುವರ್ಣಮ್ಮ, C/o ಎಚ್. ಮರುಳಪ್ಪ,
ಕರಿಯಮ್ಮನ ಗುಡಿ ಬೀದಿ, ಆರಸೀಕೆರೆ, ಮೈಸೂರು.

ಬಹುಮತಿ ರೂ. 10/- ನ್ನು ಫಿಬ್ರವರಿ ಸಂಚಿಕೆ ಹೊರಟ ಕೂಡಲೇ ಕಳುಹಿಸಲ್ಪಡುತ್ತದೆ.

# ಮೂವರು ಗೆಳೆಯರು (ಹಿಂಬದಿಯ ಚಿತ್ರ)

ಅನೇಕ ಸಾವಿರ ವರ್ಷಗಳ ಹಿಂದೆ ಹಳ್ಳಿಗಳೂ, ನಗರಗಳೂ ಏನೂ ಇರಲಿಲ್ಲ-ಮನುಷ್ಯರೂ-ಪ್ರಾಣಿಗಳೂ ದೊಡ್ಡ ದೊಡ್ಡ ಕಾಡುಗಳಲ್ಲೇ ವಾಸವಾಗಿದ್ದುವು.

ಅಂತಹ ಕಾಡಿನಲ್ಲಿತ್ತು ಒಂದು ಸಣ್ಣ ಕುಟುಂಬ. ಗಂಡ, ಹೆಂಡತಿ, ಹತ್ತು ವರ್ಷದ ಹುಡುಗ; ಹುಡುಗನ ಹೆಸರು ಕೊರಪಣ್ಣ. ಬಹಳ ಚುರುಕಾದ ಹುಡುಗ. ಆ ದಟ್ಟಡವಿಯಲ್ಲಿ ಅವನು ನೋಡದ ಮೃಗ ಪಕ್ಷಿಗಳು ಇಲ್ಲವೇ ಇಲ್ಲ. ಹಸಿವಿನಿಂದಿರುವ ಸಿಂಹದ ಗರ್ಜನೆ, ಪಕ್ಷಿಗಳ ಕಲಕಲ ಸ್ವಭಾವ ಇವೆಲ್ಲಾ ಕೊರಪಣ್ಣನಿಗೆ ಪರಿಚಯವಾಗಿದ್ದುವು. ಅವುಗಳ ಭಾವಗಳೂ, ಆತನ ತಿಳಿಬುದ್ಧಿಗೆ ಅರಿವಾಗಿದ್ದುವು.

ಒಂದು ದಿನ ಎಂದಿನಂತೆ ಅವನ ತಾಯಿತಂದೆಯರು ಅಡವಿಯೊಳಗೆ ಹೋಗಿದ್ದರು. ತಂದೆಗೆ ಬೇಟೆಯಾಡುವುದು ಕೆಲಸ. ತಾಯಿಗೆ ಗೆಡ್ಡೆಗೆಣಸುಗಳನ್ನು ಸಂಪಾದಿಸುವ ಕಾರ್ಯ. ಕೊರಪಣ್ಣನೊಬ್ಬನೇ ಗೋಡೆಗೆ ಒರಗಿ ಕುಳಿತಿದ್ದ. ಹೊರಗೆ ಜೋರೆಂದು ದೊಡ್ಡ ಗಾಳಿ ಮಳೆ ಪ್ರಾರಂಭವಾಯಿತು.

ಗಾಳಿಮಳೆಗೆ ಮೃಗ-ಪಕ್ಷಿಗಳೆಲ್ಲಾ ಅಲ್ಲಲ್ಲೇ ಮುದುಡಿ ಕೊಂಡಿದ್ದುವು. ಆಗ ಆ ಗುಡಿಸಲಿನ ಬಳಿಯಲ್ಲಿದ್ದ ಮರದಕೊಂಬೆಯಲ್ಲಿನ ಕೋತಿಯೂ, ಕೋಗಿಲೆಯೂ, ಪೊಟರೆಯಲ್ಲಿರುವ ಗಿಳಿಯೂ, ಒಂದೇ ಕಡೆಯಲ್ಲಿ ಸೇರಿಕೊಂಡುವು. 'ಸುಮ್ಮನೆ ನೆನೆದು ಸಾಯುವುದೇಕೆ? ಈ ಗುಡಿಸಲಿನೊಳಗೆ ಹೊಕ್ಕು ಮೈ ಕಾದುಕೊಳ್ಳೋಣ' ಎಂದುಕೊಂಡು, ಆ ಮೂರೂ ಒಂದೇಸಾರಿ ಇಳಿದುಬಂದು ಕೊರಪಣ್ಣನ ಗುಡಿಸಲೊಳಗೆ ಹೊಕ್ಕವು. ಅವುಗಳನ್ನು ನೋಡಿದಕೂಡಲೇ ಕೊರಪಣ್ಣ ಬಹಳ ಸಂತೋಷಪಟ್ಟ, ಮಾತಾಡಲು ಜತೆ ಸಿಕ್ಕಿತೆಂದು. ಅವನೊಡನೆ ಅಲ್ಲಿಗೆ ಬಂದ ಕಾರಣವನ್ನು ಕುರಿತು ಅವು ಹೇಳಿದುವು. "ಸರಿ. ನೀವು ಬೆಚ್ಚಗೆ ಇಲ್ಲಿರಿ. ಅಪ್ಪ ಅಮ್ಮ ಬರುತ್ತಲೇ ಹೇಳಿ ನಿಮಗೆ ಬೇಕಾದ್ದು ಮಾಡುತ್ತೇನೆ" ಎಂದ ಕೊರಪಣ್ಣ.

ಕೋತಿ ಆನಂದದಿಂದ ನಲಿದು ಅವನ ಕೈ ಹಿಡಿದು ಕಿಚಕಿಚಲಾಡಿತು. ಗಿಳಿ ಉತ್ಸಾಹದಿಂದ ಅವನ ಭುಜದಮೇಲೆ ಹಾರಿ ಅವನು ಏನು ಹೇಳಿದರೆ ಹಾಗೇ ಮಾರ್ನುಡಿಯಿತು. ಕೋಗಿಲೆ ಅವನ ತಲೆಯ ಮೇಲೆ ಕುಳಿತು ಸವಿಗೀತ ಹಾಡಿತು.

ಇಷ್ಟರಲ್ಲಿ ಸ್ವಲ್ಪ ದೂರದಲ್ಲಿ ಏನೋ ಸದ್ದು ಕೇಳಿಸಿತು. 'ಹುಲಿಯೋ ಸಿಂಹವೋ' ಎಂದು ಭಯಪಟ್ಟನು ಕೊರಪಣ್ಣ. ಸಂಶಯ ಕಳೆದುಕೊಳ್ಳಬೇಕೆಂದು, ಬಾಗಿಲಲ್ಲಿ ಕಟ್ಟಿದ್ದ ಚರ್ಮದ ಪರದೆಯನ್ನು ಬದಿಗೆಸರಿಸಿ ಹೊರಗೆ ಇಣಿಕಿ ನೋಡಿದ. ಓ! ಅಲ್ಲಿ ಅದೇನದು?

# ಚಂದ್ರಹಾರಂ

ಪೂರ್ವಕಾಲದಲ್ಲಿ ಚಂದನದೇಶವನ್ನು ಚಂದ್ರಚೂಡನೆಂಬ ರಾಜನು ಪಾಲಿಸುತ್ತಿದ್ದ. ಅವನಿಗೆ ಗಂಡುಮಕ್ಕಳಿರಲಿಲ್ಲ. ಆಶಾದೇವಿಯೆಂಬ ಒಬ್ಬಳೇ ಮಗಳುಮಾತ್ರ ಇದ್ದಳು. ರಾಜನು ವಾನಪ್ರಸ್ಥವನ್ನು ಸ್ವೀಕರಿಸಲು ಯೋಚಿಸಿ, ರಾಜ್ಯಭಾರವನ್ನು ತನ್ನ ಅಳಿಯ ಧೂಮಕೇತುವಿಗೆ ಒಪ್ಪಿಸಲು ಪಟ್ಟಾಭಿಷೇಕಕ್ಕೆ ಏರ್ಪಾಡು ಮಾಡತೊಡಗಿದ.



ಏರ್ಪಾಡು ಬಹಳ ವೈಭವದಿಂದ ಜರುಗಿತು. ಸಾಮಂತರೂ, ಮಂತ್ರಿಗಳೂ, ಸೇನಾಪತಿಗಳೂ ಪ್ರಜೆಗಳೂ ಹಾಜರಾಗಿ ಸಭೆ ಸೇರಿದರು. ಜಯಜಯಕಾರಗಳ ನಡುವೆ ಅರಸನು ಧೂಮಕೇತುವಿನ ತಲೆಗೆ ಕಿರೀಟ ಇಡಲು ಸಿದ್ಧನಾದ. ಅಷ್ಟರಲ್ಲಿ ಪೂಜ್ಯ ರಾಜಗುರು ವೇದಾರಣ್ಯರು ಬಂದುಬಿಟ್ಟರು. ರಾಜದಂಪತಿಗಳು ಭಕ್ತಿಯಿಂದ ಅವರನ್ನು ಸ್ವಾಗತಿಸಿ ಪ್ರಣಾಮ ಮಾಡಿದರು. ರಾಜಗುರು ಅವರಿಗೆ ಚಂದ್ರದೇವನ ಪ್ರಸಾದವಾದಹಣ್ಣನ್ನೊಂದು ಕೊಟ್ಟು 'ಮಗನು ಹುಟ್ಟುವನು' ಎಂದು ಹರಸಿದರು. ಪಟ್ಟಾಭಿಷೇಕವು ನಿಂತುಹೋಯಿತು. ಧೂಮಕೇತು ಧುಮುಧುಮಿಸಿದ.

ರಾಜಗುರು ಹೇಳಿದಂತೆಯೇ ರಾಣಿ ಒಬ್ಬ ಕುಮಾರ ಶಿಶುವನ್ನು ಹಡೆದಳು. ವಿಚಿತ್ರವೇನೆಂದರೆ, ಹುಟ್ಟುವಾಗಲೇ ಆ ಶಿಶುವಿನ ಕೊರಳಿನಲ್ಲಿ ಒಂದು ಚಂದಹಾರವಿತ್ತು. ಶಿಶುವನ್ನು ಕುರಿತು ರಾಜಗುರು ಹೀಗೆ ಭವಿಷ್ಯ ಹೇಳಿದರು: "ಈ ಚಂದ್ರಹಾರದಲ್ಲಿಯೇ ಈ ಮಗುವಿನ ಪಂಚಪ್ರಾಣಗಳೂ ಇವೆ; ಇದನ್ನು ಮಾನವರಾರೂ ಮುಟ್ಟಲಾರರು; ಆದರೆ ಯೌವನ ದಶೆಯಲ್ಲಿ ಒಂದು ದಿವ್ಯಶಕ್ತಿಯಿಂದ ಇವನಿಗೆ ಪ್ರಾಣಗಂಡ ವುಂಟು. ಯುಕ್ತವಯಸ್ಸು ಬರುತ್ತಲೇ ವಿವಾಹ ಮಾಡಿಬಿಟ್ಟರೆ ಆ ಗಂಡವು ತೊಲಗಿಹೋಗುತ್ತದೆ."



ಇದನ್ನು ತಿಳಿದು ರಾಜನು ದೇವರಮೇಲೆ ಭಾರಹಾಕಿ ಕುಮಾರನಿಗೆ 'ಚಂದನ' ಎಂದು ಹೆಸರಿಟ್ಟು ವೈಭವದಿಂದ ನಾಮಕರಣ ಮಹೋತ್ಸವವನ್ನು ಜರುಗಿಸಿದ.

ಕುಲಾಚಾರದಂತೆ ಚಂದನನನ್ನು ಐದನೇ ವರ್ಷದಲ್ಲಿ 'ಮಾಲಿ'ಯ ಬಳಿಗೆ ಕಳುಹಿಸಿದರು. ಆ ಹುಡುಗ ಯುಕ್ತವಯಸ್ಸು ಬರುವವರೆಗೂ ಮಾಲಿಯ ಬಳಿಯಲ್ಲಿಯೇ ಬೆಳೆಯುತ್ತ, ದೇಹಕಷ್ಟಮಾಡುತ್ತ, ಸಾಮಾನ್ಯ ಪ್ರಜೆಗಳು ತಿನ್ನುವ ಆಹಾರವನ್ನೇ ಸೇವಿಸುತ್ತ ದೊಡ್ಡವನಾದ.

ಗುರುಗಳ ಆಜ್ಞೆಯಂತೆ ಚಂದನಕುಮಾರನಿಗೆ ಮದುವೆ ಮಾಡಬೇಕೆಂದು, ರಾಜನು ಎಲ್ಲಾ ದೇಶದ ರಾಜಕುಮಾರಿಗಳ ಭಾವಚಿತ್ರಗಳನ್ನು ತರಿಸಿದ. ಅವುಗಳಲ್ಲಿ ಯಾರೋ ಒಬ್ಬಳನ್ನು ವರಿಸಿಕೊಳ್ಳುವಂತೆ ಧೂಮಕೇತುವಿನಮೂಲಕ ಚಂದನ ಮಹಲಿಗೆ ಸುದ್ದಿ ಕಳುಹಿಸಿದ.

ಆಗಲೇ ಚಂದನ ಮಹಲಿನಲ್ಲಿದ್ದ ಚಂದನನು, ಒಬ್ಬಳು ಸುಗುಣ ಸುಂದರಿಯಾದ ಕನ್ಯೆಯನ್ನು ಊಹಿಸಿಕೊಂಡು ಅಂದವಾದೊಂದು ಚಿತ್ರ ಚಿತ್ರಿಸಿದ್ದ. ಇಂತಹ ಕನ್ಯೆ ದೊರಕಿದರೇನೇ ತಾನು ಮದುವೆಮಾಡಿಕೊಳ್ಳುವುದೆಂದು ನಿಶ್ಚಯ ಮಾಡಿದ್ದ. ಆದರೂ ರಾಜಾಜ್ಞೆಗೆ ಗೌರವ ಕೊಟ್ಟು, ಅವನು ಮಾಲಿಯೊಂದಿಗೆ ಅರಮನೆಗೆ ಬಂದು ರಾಜಕುಮಾರಿಗಳ ಚಿತ್ರಗಳನ್ನೆಲ್ಲ ನೋಡಿದ. ಯಾವುದೂ ಅವನಿಗೆ ಹಿಡಿಸಲಿಲ್ಲ.

ಅರಸನು ಮಾಲಿಯನ್ನು ಕರೆದು ಗುಟ್ಟಾಗಿ ಕುಮಾರನಿಗೆ ಮರಣಗಂಡ ವಿರುವುದೆಂದೂ,

ಮದುವೆಮಾಡಿದರೇನೇ ಅದುತಪ್ಪುವುದೆಂದೂ ತಿಳಿಸಿದ. ಅದಕ್ಕೆ ಮಾಲಿ "ಕುಮಾರನು ಒಂದು ಊಹಾಸುಂದರಿಯ ಚಿತ್ರವನ್ನು ಚಿತ್ರಿಸಿಕೊಂಡಿದ್ದಾನೆ. ಅಂಥವಳು ಸಿಕ್ಕಿದರೇನೇ ಮದುವೆ ಮಾಡಿಕೊಳ್ಳುತ್ತಾನಂತೆ" ಎಂದು ವಿಷಯ ತಿಳಿಸಿದ. 'ಹಾಗಿದ್ದರೆ ಅಂತಹವಳನ್ನು ಹುಡುಕಿ ಮಗನಿಗೆ ಮದುವೆ ಮಾಡಿಸಿಬಿಡು' ಎಂದು ಅರಸು ಕೋರಿಕೊಂಡ. ಹೀಗೆ ಚಂದನನ ದೇಶಾಟನೆಗೆ ಏರ್ಪಾಡು ಜರುಗುತ್ತಿತ್ತು.



ರಾಜನೂ ಮಾಲಿಯೂ ಮಾತಾಡಿಕೊಂಡುದನ್ನು ದುಷ್ಟನಾದ ಧೂಮಕೇತು ಕೇಳಿಬಿಟ್ಟಿದ್ದ. ಹೇಗಾದರೂ ಚಂದನನಿಗೆ ಮದುವೆ ಯಾಗದಂತೆ ಮಾಡಿದರೆ ಅವನು ಸಾಯುವನು; ಆಗ ತನಗೇ ಪಟ್ಟಾಭಿಷೇಕವಾಗುತ್ತದೆ, ಎಂಬ ಆಶೆ ಅವನಿಗೆ ಹುಟ್ಟಿತು. ಆದರೆ ಆ ಮದುವೆಯಾಗದಂತೆ ಮಾಡುವುದು ಹೇಗೋ ಅವನಿಗೆ ಗೊತ್ತಾಗಲಿಲ್ಲ.

ಈ ಸಮಯದಲ್ಲಿ ನಿಕ್ಷೇಪರಾಯನೆಂಬವನು ತಿರುಗುತ್ತಾ ಧೂಮಕೇತುವಿನ ಬಳಿಗೆಬಂದ. ತಾನು ಎಂತಹ ಘನಕಾರ್ಯವಾದರೂ ಮಾಡುವೆನೆಂದು ಜಂಬಕೊಡೆದುಕೊಂಡ.

ಚಂದನಕುಮಾರನಿಗೆ ಮದುವೆ ಯಾಗದಂತೆ ಮಾಡಲು ಧೂಮಕೇತು ಈ ನಿಕ್ಷೇಪರಾಯನನ್ನೇ ನಿಯಮಿಸಿದ. ಧೂಮಕೇತು ಅವನಿಗೆ ಚಂದನನು ಚಿತ್ರಿಸಿದ್ದ ಊಹಾಸುಂದರಿಯ ಚಿತ್ರವನ್ನು ತೋರಿಸಿ 'ಇಂತಹ ಕನ್ಯೆ ಎಲ್ಲಿಯಾದರೂ ಇದ್ದರೆ ಅವನ ಕಣ್ಣಿಗೆ ಬೀಳದಂತೆ ನೋಡು" ಎಂದು ಹೇಳಿ ಚಂದನನ ಹಿಂದೆಯೇ ಆ ನಿಕ್ಷೇಪರಾಯನನ್ನು ಕಳುಹಿಸಿದ.

ದೇಶಾಟನೆ ಮಾಡುತ್ತ ಒಂದುದಿನ ಚಂದನ ರಾಜ ಮಾಲಿಯೊಂದಿಗೆ ಒಂದೆಡೆಯಲ್ಲಿ ತಳವೂರಿದ್ದ. ನಿಕ್ಷೇಪರಾಯನು ಅವನ ಬಳಿಗೆ ಒಬ್ಬ ಸಾಮಂತ ರಾಜನನ್ನು ಕಳುಹಿಸಿದ. ಆ ಸಾಮಂತನು ಚಂದನ್‌ಬಳಿಗೆ ಬಂದು "ಈ ರಾತ್ರಿ ನಾವು 'ಚಂದ್ರ-ಕೋಳಿಗಳು' ಎಂಬ ಅದ್ಭುತ ನೃತ್ಯಕ್ಕೆ ಏರ್ಪಾಡು ಮಾಡಿದ್ದೇವೆ. ನೀವು ಬರಬೇಕು" ಎಂದು ಆಹ್ವಾನ ಮಾಡಿದ. ಚಂದನನು ಮಾಲಿಯೊಂದಿಗೆ ಆ ರಾತ್ರಿಯ ನೃತ್ಯವನ್ನು ನೋಡಿ ಸಂತೋಷಪಟ್ಟ. ನೃತ್ಯಮಾಡಿದ ಸ್ತ್ರೀಯರಿಗೆ ಅವನು ಬಹುಮಾನವೀಯಲು ಉದ್ಯುಕ್ತನಾದ. ಆಗ ನಿಕ್ಷೇಪರಾಯನು ಅಡ್ಡಬಂದು "ಇವರಲ್ಲಿ ಒಬ್ಬಳನ್ನು ವರಿಸಿಕೊಳ್ಳಿ. ಅದೇ ಇವರಿಗೆಲ್ಲ

ಬಹುಮಾನ" ಎಂದ. ಚಂದನನಿಗೆ ಸಿಟ್ಟು ಬಂತು. ನಿಕ್ಷೇಪರಾಯನನ್ನು ಬಯ್ದು ಕಳುಹಿಸಿಬಿಟ್ಟ.

೨

ಗೌರಿ ತುಂಬಾ ಸುಗುಣವತಿ. ಅವಳ ತಂದೆ ಸೀನಯ್ಯ ಮುದುಕ. ರೋಗದಿಂದ ಮಂಚ ಹಿಡಿದಿದ್ದ. ಗೌರಿಯ ತಾಯಿ ಚಿಕ್ಕಂದಿನಲ್ಲೇ ಸತ್ತು ಹೋಗಿದ್ದಳು. ಅವಳನ್ನು ಮಲತಾಯಿ ಮರಿಡಮ್ಮನೇ ಬೆಳೆಸಿದಳು. ಮರಿಡಮ್ಮ ಗೌರಿಯನ್ನು ಬಹಳ ಹಿಂಸೆ ಪಡಿಸುತ್ತಿದ್ದಳು. ಈ ಸಂಕಟಗಳನ್ನೆಲ್ಲಾ ತಡೆದುಕೊಂಡು ಕಾಲಹರಣ ಮಾಡುತ್ತಿದ್ದಳು ಗೌರಿ. ಮರಿಡಮ್ಮನಿಗೆ 'ಚಿನ್ನಿ' ಎಂಬ ಸ್ವಂತ ಮಗಳೂ ಇದ್ದಾಳೆ. ಗೌರಿ ಎಷ್ಟು 'ತುಂಬಿದಕೊಡ'ವೋ ಚಿನ್ನಿ ಅಷ್ಟು 'ತೂತಿನಕೊಡ'ಮೇಲೆ ಬುದ್ಧಿಯೂ ಅಷ್ಟಷ್ಟೇ.



ಈ ಗೌರಿಯ ಗ್ರಾಮಕ್ಕೇ ಬಂದ ನಿಕ್ಷೇಪರಾಯ. ಅವನು ಬಾವಿಯ ಬಳಿಯಲ್ಲಿ ಸ್ನಾನ ಮಾಡುತ್ತಿರುವಾಗ, ಗೌರಿ ಬಿಂದಿಗೆಯನ್ನು ಕಂಕುಳಲ್ಲಿಟ್ಟುಕೊಂಡು ಅಲ್ಲಿಗೇ ಬಂದಳು. ಗೌರಿಯನ್ನು ನೋಡುತ್ತಲೇ ನಿಕ್ಷೇಪರಾಯನಿಗೆ ಬೆರಗಾಯಿತು. ಗೌರಿ ಸಾಕ್ಷಾತ್ ಚಂದನನು ಚಿತ್ರಿಸಿದ ಆ 'ಊಹಾಸುಂದರಿ'ಯೇ ಆಗಿದ್ದಾಳೆ! ಇವಳನ್ನು ನೋಡಿದರೆ ಚಂದನ್ ತಪ್ಪದೆ ಮದುವೆ ಮಾಡಿಕೊಳ್ಳುತ್ತಾನೆ!

ಗೌರಿ ಚಂದನನ ಕಣ್ಣಿಗೆ ಬೀಳದಂತೆ ಮಾಡಲು ನಿಕ್ಷೇಪರಾಯ ಒಂದುಯುಕ್ತಿ ಹೂಡಿದ. ಅವನು ಮರಿಡಮ್ಮನನ್ನು ಒಳ್ಳೆಯದು ಮಾಡಿಕೊಂಡ. ಚಿನ್ನಿಯನ್ನು ನೋಡಿದರೆ ಚಂದನ ಕುಮಾರನು ತಪ್ಪದೆ ಮದುವೆ ಮಾಡಿಕೊಳ್ಳುತ್ತಾನೆಂದು ಹೇಳಿ ಅವಳನ್ನು ನಂಬಿಸಿದ, ಉಬ್ಬಿಸಿದ, ಅವಳ ಮನೆಯಲ್ಲಿಯೇ ವಾಸ ಏರ್ಪಡಿಸಿಕೊಂಡ.

ಅದಕ್ಕೆ ಮೊದಲೇ ಮರಿಡಮ್ಮ ಗೌರಿಯ ಮದುವೆಯ ಪ್ರಯತ್ನವನ್ನು ಸ್ವಲ್ಪಮಟ್ಟಿಗೆ ಮಾಡಿದ್ದಳು. ಮರಿಡಮ್ಮನಿಗೆ ಒಬ್ಬ ಅಣ್ಣ ಇದ್ದಾನೆ. ಅವನಿಗೆ ಬುಜ್ಜಾಯಿ ಎಂಬ ಒಬ್ಬ ಮಗ ಇದ್ದಾನೆ—ಹುಚ್ಚೋ ಹೆಡ್ಡೋ ಸೇರಿದವ. ಅವನಿಗೇ ಗೌರಿಯನ್ನು ಕೊಟ್ಟು ಮದುವೆ ಮಾಡುವುದೆಂದು ಮರಿಡಮ್ಮ ತನ್ನ

ಅಣ್ಣನನ್ನೂ, ಬುಜ್ಜಾಯಿಯನ್ನೂ ಕರೆಸಿದಳು. "ಈ ಮದುವೆ ನನಗಿಷ್ಟವಿಲ್ಲ" ಎಂದು ಗಂಡ ಹೇಳಿದರೆ, "ಇವಳ ಮುಖಕ್ಕೆ ಬುಜ್ಜಾಯಿಯಲ್ಲದೆ, ಚಂದನರಾಜ ಬರುತ್ತಾನೆಯೆ!" ಎಂದು ಮರಿಡಮ್ಮ ಹಳಿದಳು.

ಮರಿಡಮ್ಮ ಈ ಮದುವೆ ಜರುಗಿಸುವುದರೊಳಗಾಗಿಯೇ ಚಂದನರಾಜ ಆ ಗ್ರಾಮಕ್ಕೆ ಬಂದ. ಆಗ ಚಿನ್ನಿಗೆ ಗೌರಿಯು ನಗ ನಟ್ಟುಗಳನ್ನೆಲ್ಲಾ ಇಟ್ಟು ಅಲಂಕರಿಸಿದರು. ಅವಳ ಕೈಯಲ್ಲೊಂದು ಹೂವಿನ ಮಾಲೆಯನ್ನಿತ್ತು ಚಂದನರಾಜನ ದಾರಿಗೆ ಅಡ್ಡವಾಗಿ ನಿಲ್ಲಿಸಿದರು. ಹೀಗೆ ದಾರಿಗೆ ಅಡ್ಡವಾಗಿ ವೇಷ ಹಾಕಿದಂತೆ ನಿಂತಿದ್ದ ಚಿನ್ನಿಯನ್ನು ನೋಡಿ, ಚಂದನನು ಮಾಲಿಯನ್ನು ಅರ್ಥವತ್ತಾಗಿ ನೋಡಿದ. 'ಏಕೆ ದಾರಿಗಡ್ಡ ನಿಂತಿದ್ದಿ?' ಎಂದು ಕೇಳಿದ ಮಾಲಿ. "ಈ ಮಾಲೆ ಹಾಕಿಸಿಕೊಳ್ಳಿ" ಎಂದು ಅಲಂಕಾರದ ಚಿನ್ನಿ ಚಂದನ ರಾಜನನ್ನು ಕೇಳಿಕೊಂಡಳು.



ಇದನ್ನೆಲ್ಲ ನೋಡಿ ಚಂದನನಿಗೆ ಕನ್ಯಾನ್ವೇಷಣೆಯಲ್ಲಿಯೇ ವಿರಕ್ತಿ ಹುಟ್ಟಿತು. ದೇಶಾಟನೆಯನ್ನು ಸಾಕು ಮಾಡಿ ಮಾಲಿಯೊಂದಿಗೆ ಅರಮನೆಯ ದಾರಿ ಹಿಡಿದ.

ಮರಿಡಮ್ಮನಿಗೆ ಆಶಾಭಂಗವಾಯಿತು. ನಿಕ್ಷೇಪರಾಯ ತೊಂದರೆಯಲ್ಲಿ ಬಿದ್ದ. ಆದರೆ ಉಪಾಯಶಾಲಿಯಾದುದರಿಂದ ತಪ್ಪಿಸಿಕೊಂಡ. "ಹಿರಿಯವಳಾದ ಗೌರಿಗೆ ಮದುವೆಯಾಗದ್ದರಿಂದಲೇ ಚಂದನರಾಜ ಚಿನ್ನಿಯನ್ನು ವರಿಸಲಿಲ್ಲ. ಮೊದಲು ಅವಳಿಗೆ ಮದುವೆ ಮಾಡಿಬಿಟ್ಟರೆ ಪೀಡೆ ತೊಲಗಿ, ಕಾರ್ಯಾನುಕೂಲವಾಗುತ್ತೆ" ಎಂದು ಬೋಧನೆ ಮಾಡಿದ.

ಮರಿಡಮ್ಮ ಬಲವಂತದಿಂದ ಗೌರಿಯನ್ನು ಒಪ್ಪಿಸಿ ಬುಜ್ಜಾಯಿಯೊಂದಿಗೆ ಮದುವೆಗೆ ಏರ್ಪಾಡು ಮಾಡಿದಳು. ನಿಕ್ಷೇಪರಾಯ ಮೆಲ್ಲನೆ ಜಾರಿಕೊಂಡು ಹೋಗಿಬಿಟ್ಟ.

ಗೌರಿ ಹೇಗೋ ಈ ಮದುವೆಗೆ ಒಪ್ಪಿಕೊಂಡಳಾದರೂ ಅವಳ ತಂದೆ ಸೀನಯ್ಯ ಎಷ್ಟುಮಾತ್ರವೂ ಸಮ್ಮತಿಸಲಿಲ್ಲ. ಮದುವೆಗೆ ಮುಂಚಿನದಿನ ಗೌರಿಯನ್ನು ಕರೆದು ಗುಟ್ಟಾಗಿ "ಈ ರಾತ್ರಿಯೇ ಈ ಮನೆಬಿಟ್ಟು ಹೋಗು. ಈ ಹುಚ್ಚನನ್ನು ಮದುವೆಯಾಗಿ ನಿನ್ನಬಾಳುವೆಯನ್ನು ಹಾಳು ಮಾಡಿ ಕೊಳ್ಳುವುದಕ್ಕಿಂತ ಎಲ್ಲಿಯಾದರೂ ಹಾಯಾಗಿರು" ಎಂದುಹೇಳಿದ. ಗೌರಿ ತಂದೆಯನ್ನು ಬಿಟ್ಟು ಹೋಗಲಾರದೆ ಅತ್ತಳು. ಬಳಿಕ ಕಣ್ಣೀರಿನಿಂದ

ತಂದೆಯ ಪಾದವನ್ನು ತೊಳೆದು ಕಣ್ಣಿಗದ್ದಿಕೊಂಡು ಉಟ್ಟಬಟ್ಟೆಯೊಂದಿಗೆ ಮನೆ ಬಿಟ್ಟು ಒಂಟಿಯಾಗಿ ಹೊರಟು ಹೋದಳು.

೩

ಅಚಲಾ, ಚಂಚಲಾ ಎಂಬ ದೇವಕನ್ಯೆಯರು ಅಕ್ಕತಂಗಿಯರಾಗಿದ್ದರು. ಒಂದು ಬೆಳದಿಂಗಳ ರಾತ್ರಿ ಅವರು ವಿಮಾನದಲ್ಲಿ ಆಕಾಶ ಮಾರ್ಗವಾಗಿ ಹೋಗುತ್ತಿರುವಾಗ, ನಂದನ ವನದಲ್ಲಿ ಚಂದನರಾಜನು ಅವರ ಕಣ್ಣಿಗೆಬಿದ್ದ. ಚಂಚಲೆ ಅಕ್ಕನಿಂದ ಅವನ ಊಹಾಸುಂದರಿಯನ್ನು ಕುರಿತೂ, ಅವನಿಗಿರುವ ಮರಣಗಂಡವನ್ನು ಕುರಿತೂ ಕೇಳಿಕೊಂಡಳು. ಆಗ ಚಂದನರಾಜನಿಗೆ ಪ್ರಾಣದಾನ ಮಾಡಿ, ಅವನು ತನ್ನನ್ನು ವರಿಸಿಕೊಳ್ಳುವಂತೆ ಮಾಡಬೇಕೆಂದು ಚಂಚಲೆಗೆ ದುರ್ಬುದ್ಧಿ ಹುಟ್ಟಿತು. ಅಕ್ಕಬೇಡವೆಂದರೂ ಕೇಳದೆ ಅವಳು ವಿಮಾನದಿಂದ ಇಳಿದು ಚಂದನರಾಜನ ಬಳಿಗೆ ಬಂದಳು.



ಆದರೆ ಚಂಚಲೆಯ ಕೋರಿಕೆ ಫಲಿಸಲಿಲ್ಲ. ಚಂದನರಾಜ ಚಂಚಲೆಯನ್ನು ವರಿಸಿಕೊಳ್ಳಲು ಒಪ್ಪಲಿಲ್ಲ. ಚಂಚಲೆಗೆ ಕೋಪ ಬಂತು. ಅವಳು ತನ್ನ ದಿವ್ಯಶಕ್ತಿಯಿಂದ ಚಂದನರಾಜನ ಕೊರಳಲ್ಲಿದ್ದ ಚಂದ್ರಹಾರವನ್ನು ಎಳೆದುಕೊಂಡು ಹೋಗಿಬಿಟ್ಟಳು. ಆ ಕೂಡಲೇ ಚಂದನರಾಜ ಸತ್ತು ಬಿದ್ದುಬಿಟ್ಟ.

ಚಂದನರಾಜನ ಸಾವಿಗೆ ತಾಯ್ತಂದೆಯರೂ ಬಂಧುಗಳೂ ವಿಲಪಿಸಿದರು. ಚಂದ್ರಹಾರವು ಹೇಗೆ ಹೋಯಿತೋ ಹಾಗೆಯೇ ತಿರುಗಿ ಬಂದೀತೆಂಬ ಆಶೆಯಿಂದ, ರಾಜನು ಚಂದನರಾಜನ ಶರೀರವನ್ನು, ಚಂದನಮಹಲಿನಲ್ಲಿಟ್ಟು ಕಾಪಾಡುತ್ತಾ ಬರಬೇಕೆಂದು ಮಾಲಿಗೆ ಆಜ್ಞಾಪಿಸಿದ. ಹಾಗೆಯೇ ಅವನ ಶರೀರವನ್ನು ಮಾಲಿ ಚಂದನಮಹಲಿನಲ್ಲಿ ಭದ್ರವಾಗಿರಿಸಿ ಕಾವಲು ಕಾಯುತ್ತಿದ್ದ.

ಮರುದಿನ ರಾತ್ರಿ ಚಂಚಲೆ ಮತ್ತೆ ಚಂದನರಾಜನ ಬಳಿಗೆಬಂದಳು. ಅವನನ್ನು ಬದುಕಿಸಿ ತನ್ನನ್ನು ವರಿಸಿಕೊಳ್ಳುವಂತೆ ಕೇಳಿದಳು. ಚಂದನ್ ನಿರಾಕರಿಸಿದ. "ನೀನು ಯೋಚಿಸಿ ಬುದ್ಧಿ ತಂದುಕೊಳ್ಳಲಿಕ್ಕಾಗಿ, ದಿನಾ ಅರ್ಧರಾತ್ರಿ ಎರಡು ಗಳಿಗೆ ಪ್ರಾಣ ಕೊಡುತ್ತೇನೆ. ಯೋಚಿಸಿಕೋ" ಎಂದು ಎಚ್ಚರಿಸಿ ಚಂಚಲೆ ಹೊರಟು ಹೋದಳು.

ತನ್ನ ಶಿಷ್ಯನೂ ಯುವರಾಜನೂ ಆದ ಚಂದನನ ಮರಣದಿಂದ ಚಿಂತಿತನಾದ ಮಾಲಿ

ತನ್ನ ಕುಟೀರದಲ್ಲಿ ಕುಳಿತುಕೊಂಡಿದ್ದಾಗ, ಆಕಸ್ಮಿಕವಾಗಿ ಚಂದನನ ಕಂಠಸ್ವರವು ಕೇಳಿ ಬಂತು. ಆಶ್ಚರ್ಯಪಟ್ಟನು. ನೋಡಿದರೆ ನಿಜವಾಗಿ ಚಂದನರಾಜನೇ. ಚಂದನ್ ಬದುಕಿರುವುದನ್ನು ನೋಡಿ ಮಾಲಿಯ ಆನಂದಕ್ಕೆ ಮೇರೆ ಇಲ್ಲ. ಚಂದನ್ ಮಾಲಿಯೊಡನೆ ಚಂಚಲೆಯ ವೃತ್ತಾಂತವನ್ನು ಹೇಳಿದ. ಈ ಸಾವು ಬದುಕುಗಳ ನಡುವಿನಿಂದ ತಾನು ಪಾರಾಗುವ ವರೆಗೆ ಈ ಸಂಗತಿಯನ್ನು ಯಾರಿಗೂ ಹೇಳಕೂಡದೆಂದೂ ತಿಳಿಸಿಟ್ಟ.



ಅತ್ತ ದೇವ ಲೋಕದಲ್ಲಿ ಅಚಲೆಗೆ ತಂಗಿ ಚಂಚಲೆಯ ಪ್ರವರ್ತನೆ ಏನೂ ಹಿಡಿಸಲಿಲ್ಲ. ಮಾನವರೊಂದಿಗೆ ಪಂತಕಟ್ಟಬಾರದೆಂದೂ, ಚಂದನನ ಪ್ರಾಣದೊಂದಿಗೆ ಆಡಬೇಡವೆಂದೂ ಅಚಲೆ ಚಂಚಲೆಗೆ ಬುದ್ಧಿ ಹೇಳಿದಳು. ಆದರೆ ಚಂಚಲೆ ಹಟ ಬಿಡಲಿಲ್ಲ. ಆಗ ಅಚಲೆ ತನ್ನ ದಿವ್ಯದೃಷ್ಟಿಯಿಂದ ಚಂದನನ ಊಹಾಸುಂದರಿಯನ್ನು ಹುಡುಕಿ ನೋಡಿದಳು. ಮನೆಬಿಟ್ಟುತೆರಳಿದ ಗೌರಿ ಗುಡ್ಡಗಾಡುಗಳ ಲ್ಲೊಂದೆಡೆ ಪ್ರಜ್ಞೆ ತಪ್ಪಿ ಬಿದ್ದಿರುವುದನ್ನು ಕಂಡು ಹಿಡಿದಳು. ಒಡನೆಯೆ ಅಚಲೆ ತನ್ನ ದೈವಮಾಯೆಯಿಂದ ಅಲ್ಲಿಗೆ ಹೋಗಿ ಗೌರಿಯನ್ನೆತ್ತಿತಂದು ಚಂದನ ಮಹಲಿನಲ್ಲಿ ಹಾಕಿ ಮಾಯವಾಗಿ ಹೋದಳು. ಸ್ವಲ್ಪ ಹೊತ್ತಿಗೆಲ್ಲಾ ಚಂದನರಾಜ ಬದುಕಿ ಎದ್ದ. ತನ್ನ ಊಹಾಸುಂದರಿಯನ್ನು ಪ್ರತ್ಯಕ್ಷವಾಗಿ ನೋಡಿದ. ಅವಳ ಚರಿತ್ರೆಯನ್ನೆಲ್ಲಾ ಕೇಳಿದ. ಇಷ್ಟರಲ್ಲಿ ಮಾಲಿಯೂ ಅಲ್ಲಿಗೆ ಬಂದ. ಗೌರಿಯನ್ನು ನೋಡಿ ಸಂತೋಷಪಟ್ಟ. ಅವನು ರಹಸ್ಯ ಮಾರ್ಗದಿಂದ ಗೌರೀ ಚಂದನರನ್ನು ಊರಹೊರಗಿನ ಭದ್ರಾಲಯಕ್ಕೆ ಕರೆದೊಯ್ದು ಅಲ್ಲಿ ಅವರಿಬ್ಬರಿಗೂ ಪಾಣಿಗ್ರಹಣ ಮಾಡಿಸಿ ಮದುವೆ ಮಾಡಿದ.

ಈ ಸಂಗತಿ ತಿಳಿಯುತ್ತಲೇ ಚಂಚಲೆ ತುಫಾನಿನಂತೆ ಬಂದಳು. ಚಂದನನಮೇಲೆ ಉರಿದು ಬಿದ್ದಳು. ಗೌರಿ ಎಷ್ಟುಬೇಡಿಕೊಂಡರೂ ಅವಳ ಮನಸ್ಸು ಕರಗಲಿಲ್ಲ. ಅವಳು ಚಂದನರಾಜನನ್ನು ಜರೆದಾಡಿದಳು. ಅವನು ಚಂದನವನವನ್ನು ದಾಟಿ ಅಡಿಯಿಟ್ಟನಾದರೆ ಶಾಶ್ವತವಾಗಿ ಪ್ರಾಣ ತೆಗೆಯುವೆನೆಂದು ಹೆದರಿಸಿ ಹೊರಟು ಹೋದಳು.

೪

ಧೂಮಕೇತು ಅಂದು ಕೊಂಡಂತೆಯೇ ಚಂದನರಾಜನ ಮದುವೆ ತಪ್ಪಿತು ; ಚಂದನ್

ಸತ್ತ. ತನಗಿನ್ನೂ ಸಿಂಹಾಸನ ಬರಲಿಲ್ಲವಲ್ಲ, ಎಂದು ಧೂಮಕೇತು ಚಿಂತಿಸಿದ. ಬಳಿಕ ನಿಕ್ಷೇಪರಾಯನ ಸಲಹೆಯಂತೆ ಸಂನ್ಯಾಸಿ ವೇಷ ಧರಿಸಿಕೊಂಡು ಮಹಾರಾಜನ ಇದಿರಿಗೆ ಬಂದು, ತಾನು ಸಂನ್ಯಾಸಿ ಯಾಗುವೆನೆಂದು ಹೆದರಿಸಿದ. ರಾಜನು ಗತ್ಯಂತರವಿಲ್ಲದೆ ಧೂಮಕೇತುವಿಗೆ ಪಟ್ಟಾಭಿಷೇಕ ಮಾಡಲು ಒಪ್ಪಿಕೊಂಡ. ಪಟ್ಟಾಭಿಷೇಕದ ಏರ್ಪಾಡಿನ ಭಾರ ನಿಕ್ಷೇಪರಾಯನಮೇಲಿತ್ತು.

ನಿಕ್ಷೇಪರಾಯನು ಪಟ್ಟಾಭಿಷೇಕದ ಏರ್ಪಾಡೆಲ್ಲಾ ಪೂರ್ತಿಮಾಡಿ, ಹೂಮಾಲೆಗಳನ್ನು ತಯಾರಿಸಲು ಹೇಳಲಿಕ್ಕಾಗಿ ಮಾಲಿಯ ಕುಟೀರಕ್ಕೆ ಬಂದ. ಅಲ್ಲಿ ಮಾಲಿ ಇರಲಿಲ್ಲ. ದೇವಿಯ ಮುಂದೆ ಸಾಷ್ಟಾಂಗ ನಮಸ್ಕಾರಮಾಡುತ್ತಿದ್ದ ಗೌರಿಮಾತ್ರ ಅವನ ಕಣ್ಣಿಗೆಬಿದ್ದಳು. ಎಲ್ಲಿಲ್ಲದ ಭಯಬಂದಿತವನಿಗೆ. ಆ ಕುಟೀರದ ಹೊರಗೆ ಕಿಂಕರರ ಕಾವಲನ್ನಿಟ್ಟು ಹೋಗಿ ಈ ವಾರ್ತೆ ಧೂಮಕೇತುವಿಗೆ ತಿಳಿಸಿದ. ಒಡನೇ ಅವಳನ್ನು ಬಂಧಿಸಿ ಹಿಡಿದುತರುವಂತೆ ಧೂಮಕೇತು ನಿಕ್ಷೇಪರಾಯನಿಗೆ ಆಜ್ಞಾಪಿಸಿದ. ನಿಕ್ಷೇಪರಾಯ ಹೊರಟ. ಇಷ್ಟರೊಳಗೆ ಬುದ್ಧಿಶಾಲಿ ಮಾಲಿ, ನಿಕ್ಷೇಪರಾಯನಿಂದ ಗೌರಿಯ ಪ್ರಾಣಕ್ಕೆ ಅಪಾಯಬಂದೀತೆಂದು ಊಹಿಸಿ, ಅವಳನ್ನು ಚಂದನಮಹಲಿಗೆ ಕರೆದೊಯ್ದು, ಅಲ್ಲಿಯ ರಹಸ್ಯಮಾರ್ಗದಿಂದ ಅವಳನ್ನು ಭದ್ರಾಲಯದಲ್ಲಿ ಸೇರಿಸಿದ. ಬಳಿಕ ಇಷ್ಟುಕಾಲ ರಹಸ್ಯವಾಗಿಟ್ಟ ಸಂಗತಿಗಳನ್ನೆಲ್ಲಾ ರಾಜನಿಗೆ ಅರಿಕೆ ಮಾಡಲಿಕ್ಕಾಗಿ ರಾಜನಗರಿಗೆಹೋದ. ಅಲ್ಲಿ ಧೂಮಕೇತು ಅವನನ್ನು ಹಿಡಿದು, ಹೊಡೆದು ಕೆಡವಿಸಿ ಗೌರಿಯ ಕತೆ ತೀರಿಸಿಬಿಡಲಿಕ್ಕಾಗಿ ಚಂದನಮಹಲಿಗೆ ಬಂದನು.



ಈ ನಡುವೆ ಸೇವಕರು ನಿಕ್ಷೇಪರಾಯನನ್ನು ಕುರಿತು, ಮಾಲಿ ಗೌರಿಯೊಂದಿಗೆ ಚಂದನಮಹಲಿಗೆ ಹೊಕ್ಕನೆಂದು ತಿಳಿಸಿದರು. ಆ ಮಹಲನ್ನೆಲ್ಲಾ ಎಷ್ಟು ಗಾಳಿಸಿ ಜಾಳಿಸಿನೋಡಿದರೂ ಅವರ ಜಾಡೆ ತಿಳಿಯಲೇ ಇಲ್ಲ. ಅಷ್ಟರಲ್ಲಿ ಧೂಮಕೇತು ಬಂದನಲ್ಲಿ. ಮಾಲಿಯನ್ನು ತಾನು ಹೊಡೆದು ಕೆಡವಿದೆ; ಗೌರಿ ಈ ಮಹಲಿನಲ್ಲೇ ಅಡಗಿದ್ದಾಳೆ. ಈ ಮಹಲಿಗೇ ಬೆಂಕಿ ಹಚ್ಚಿಬಿಟ್ಟರೆ ಎಲ್ಲಾ ಪೀಡೆಯೂ ತೊಲಗಿಬಿಡುತ್ತದೆ—

ಎಂದ ಧೂಮಕೇತು. ಸೇವಕರು ಬೆಂಕಿಯನ್ನು ತರಲಿಕ್ಕೆ ಮಾಲಿಯ ಕುಟೀರಕ್ಕೆ ತೆರಳಿದರು.

ಇಷ್ಟರಲ್ಲಿ ಚಂದನ್ ಮಾಮೂಲಿನಂತೆ ಬಮುಕಿಕೊಂಡು ಎದ್ದ; ನೇರಾಗಿ ಮಾಲಿಯ ಕುಟೀರಕ್ಕೆ ಹೋದ. ಅಲ್ಲಿ ಗೌರಿಯೂ ಮಾಲಿಯೂ ಇಲ್ಲದಿರುವುದನ್ನು ನೋಡಿ, ಭದ್ರಾಲಯಕ್ಕೆ ಹೋಗಿರಬಹುದೆಂದು ಊಹಿಸಿ, ರಹಸ್ಯ ಮಾರ್ಗದಿಂದ ಭದ್ರಾಲಯಕ್ಕೆ ಹೊರಟ. ಇದನ್ನೆಲ್ಲಾ ಮರೆಯಲ್ಲಿದ್ದು ನೋಡುತ್ತಿದ್ದ ಧೂಮಕೇತು ಮತ್ತು ನಿಕ್ಷೇಪರಾಯರು ಅವನ ಹಿಂದೆಯೇ ಭಟರೊಂದಿಗೆ ಹೊರಟರು.



ತನ್ನ ಆಣತಿಯನ್ನು ಉಲ್ಲಂಘಿಸಿ ಚಂದನ್ ಭದ್ರಾಲಯಕ್ಕೆ ಹೋದುದನ್ನು ನೋಡಿ, ಚಂಚಲೆ ಸಿಟ್ಟಿನಿಂದ ಬಂದು, ಚಂದ್ರಹಾರವನ್ನು ಶಾಶ್ವತವಾಗಿ ಕಿತ್ತುಕೊಂಡು, ಚಂದನನನ್ನು ಕೊಂದುಹಾಕಿ ಹೋಗಿಬಿಟ್ಟಳು. ಆಲಯದೊಳಗಿದ್ದ ಗೌರಿ ಹೊರಗೆ ಬಂದು ಸತ್ತುಬಿದ್ದಿದ್ದ ಪತಿಯನ್ನು ನೋಡಿ ಶೋಕಿಸ ತೊಡಗಿದಳು. ಈ ಸಮಯದಲ್ಲಿ ಅಲ್ಲಿಗೆ ಧೂಮಕೇತು ನಿಕ್ಷೇಪರಾಯಂದಿರು ಬಂದರು. ಪಂಚಾಯ್ತಿಮಾಡಿದರು. 'ಗೌರಿ ರಾಕ್ಷಸಿ, ಇವಳೇ ಇವನನ್ನು ಕೊಂದಳು. ತಿನ್ನ ಲಿಕ್ಕೆ ಹೊರಗೆ ಎಳೆದು ತಂದಳು' ಎಂದೆಲ್ಲಾ ಹೇಳಿದರು. ತಾನು ಅಂತಹಳಲ್ಲವೆಂದೂ, ಈತನ ಧರ್ಮಪತ್ನಿಯೆಂದೂ, ದೇವಕನ್ಯೆ ಯೊಬ್ಬಳು ಇವನಪ್ರಾಣ ತೆಗೆದಳೆಂದೂ ಗೌರಿ ಎಷ್ಟೋ ಹೇಳಿಕೊಂಡಳು. ಯಾರೂ ನಂಬಲಿಲ್ಲ. ರಾಜ್ಯದ ಆಶೆಯಿಂದ ಹೀಗೆ ಹೇಳುವಳೆಂದು ಅಂದುಕೊಂಡರು. ತತ್ಕ್ಷಣವೇ ಚಂದನರಾಜನ ಶರೀರಕ್ಕೂ, ಅದರೊಂದಿಗೆ ಗೌರಿಯನ್ನೂ ಸಹಾ ಸಜೀವವಾಗಿ ಸೇರಿಸಿ ದಹನಕ್ರಿಯೆ ಮಾಡಬೇಕೆಂದು ಆಜ್ಞೆ ಮಾಡಿಬಿಟ್ಟರು ಪಂಚಾಯತೀದಾರರು. ಕಟ್ಟಿಗೆ ಗಳನ್ನು ತರಲಿಕ್ಕಾಗಿ ಕಿಂಕರರನ್ನು ಕಳಿಸಲಾಯಿತು. ಮೂರ್ಖರಾದ ಕಿಂಕರರು ಕಟ್ಟಿಯ ಮೇಲಿನ ಚಿಟ್ಟಗೂಡೆ ಎಂಬಲ್ಲಿಗೆ ಹೋಗಿ, ಅಲ್ಲಿದ್ದವರಿಗೆಲ್ಲಾ ಕಟ್ಟಿಗೆಗಳನ್ನು ತೆಗೆದುಕೊಂಡು ಬರುವಂತೆ ಆಹ್ವಾನವಿತ್ತರು.

ಗುಟ್ಟಾಗಿ ಕೆಲಸ ಮುಗಿಸಿಬಿಡಬೇಕೆಂದು ಧೂಮಕೇತು ಯೋಚಿಸಿದ್ದ. ಆದರೆ ಜನರು ತುಂಬಾ ಕೂಡಿಬಂದದ್ದು ನೋಡಿ ಭಯಪಟ್ಟ. ನಿಕ್ಷೇಪರಾಯನು ಅವನಿಗೆಧೈರ್ಯಹೇಳಿ

ಗೌರಿ ರಾಕ್ಷಸಿಯೆಂದು ಆ ಜನರನ್ನೆಲ್ಲಾ ನಂಬಿಸಿಬಿಟ್ಟನು.

ಚಿತಿ ಕೂಡಿಸಿದರು. ಅದರಮೇಲೆ ಗೌರಿಯನ್ನೂ ಚಂದನರಾಜನ ಶರೀರವನ್ನೂ ಏರಿಸಿದರು. ತನಗೆ ಅಡ್ಡಬರುವ ಮಾನವಮಾತ್ರರು ಒಬ್ಬರೂ ಇಲ್ಲದ್ದು ನೋಡಿ ಗೌರಿ ಚಿತೆಯ ಮೇಲೆ ನಿಂತುಕೊಂಡು ಇಷ್ಟದೇವತೆಯಾದ ಲೋಕ ಮಾತೆಯನ್ನೂ ಕುಲದೇವತೆಗಳನ್ನೂ ಪ್ರಾರ್ಥಿಸುತ್ತಾ ಈ ಅನ್ಯಾಯವನ್ನು ಸರಿಮಾಡಬೇಕೆಂದು ಮೊರೆಯಿಟ್ಟಳು.



ಈ ಸಮಯದಲ್ಲಿ ಇಂದ್ರಲೋಕದಲ್ಲಿ ಇಂದ್ರಾದಿ ದಿಕ್ಪಾಲಕರು ವೈಭವವಾಗಿ ಸಭೆಸೇರಿದ್ದರು.

ದೇವಲೋಕದ ಅಪ್ಸರಸಿಯರು ಸಿಂಗರಿಸಿಕೊಂಡು ಅತ್ತ ಹೋಗುತ್ತಿದ್ದರು. ಅಚಲೆಯೂ ಚಂಚಲೆಯೂ ಹಾಗೇ ಹೊರಟಿದ್ದರು. ಆಗ ಅಚಲೆ ಚಂಚಲೆಗೆ ಇನ್ನೊಮ್ಮೆ ಬುದ್ಧಿ ಹೇಳಿದಳು: "ನೋಡಿದಿಯೇನೇ, ನಿನ್ನ ಪಂತವು ಎಲ್ಲಿಯವರೆಗೆ ಬಂತು? ಚಂದನನೊಂದಿಗೆ ಆ ಸಾಧ್ವಿಯನ್ನು ಕೂಡಾ ನಾಶಮಾಡುತ್ತಿರುವಿಯಲ್ಲಾ! ಈಗಾದರೂ ನನ್ನ ಮಾತು ಕೇಳು. ಚಂದ್ರಹಾರವನ್ನು ಅವನಿಗೆ ಕಳುಹಿಸು" ಎಂದಳು. ಮಹಾ ಹಟಮಾರಿ ಚಂಚಲೆ ಕೇಳಲೇ ಇಲ್ಲ.

ದೇವಸಭೆಯಲ್ಲಿ ಅಚಲಾ, ಚಂಚಲಾ ಮತ್ತು ಇತರ ಅಪ್ಸರಸಿಯರೂ ನೃತ್ಯಮಾಡುತ್ತಿದ್ದರು.

ಇತ್ತ ಗೌರಿ ಪ್ರಾರ್ಥಿಸುತ್ತಿರುವಾಗಲೇ ಚಿತೆಗೆ ಬೆಂಕಿ ಹಚ್ಚಲಾರಂಭಿಸಿದರು. ಆದರೆ ಬೆಂಕಿ ಸುಲಭವಾಗಿ ಹಿಡಿಯಲೇ ಇಲ್ಲ. ಬೆಂಕಿ ಹಚ್ಚಲು ಬಂದ ಪ್ರತಿಯೊಂದು ದೀವಿಟಿಗೆಯೂ ನಂದಿನಂದಿ ಹೋಗುತ್ತಿತ್ತು. ಅಗ್ನಿದೇವನಿಗೆ ಮಾತ್ರ ಕರುಣೆ ಹುಟ್ಟಿದ್ದಲ್ಲ. ದೇವಲೋಕದಲ್ಲಿರುವ ಎಲ್ಲಾ ದೇವತೆಗಳಿಗೂ ಸಿಟ್ಟು ಬಂತು. ಗೌರಿಯ ಆರ್ತನಾದವು ಅವರ ಕಿವಿಗೆ ಕೇಳಿಸಿತು. ಚಂಚಲೆಯನ್ನು ನೋಡಿ ಎಲ್ಲರ ಮುಖದಲ್ಲಿ ಕೋಪವು ತಾಂಡವಿಸಿತು. ಎಲ್ಲ ಅಪ್ಸರಸಿಯರೂ ಚಂಚಲೆಯನ್ನು ಬಿಟ್ಟು ದೂರ ಹೋದರು. ಚಂಚಲೆಗೆ ತೀರದ ಪರಾಭವವೂ ಪತನವೂ ಉಂಟಾಯಿತು. ಅವಳ ದೈವೀಕ ಶಕ್ತಿಯೇ ಉಡುಗಿಹೋಯಿತು. ಎಲ್ಲರೂ ಅವಳಿಗೆ ಛೀಮಾರಿ ಹಾಕಿದರು. ಅವಳು ತನ್ನದು ಅಪರಾಧ ವಾಯಿತೆಂದು

ಇಂದ್ರನ ಪಾದಗಳಿಗೆಬಾಗಿದಳು. ಪ್ರಾಯಶ್ಚಿತ್ತವಾಗಿ ಚಂದ್ರಹಾರವನ್ನು ಚಂದನರಾಜನ ಕಡೆಗೆ ಕಳುಹಿಸಿಬಿಟ್ಟಳು.

ಎಲ್ಲರೂ ನೋಡುತ್ತಿದ್ದಂತೆಯೇ ಚಿತೆಯ ಮೇಲಿದ್ದ ಚಂದನರಾಜ ಎದ್ದು ಕುಳಿತುಬಿಟ್ಟ. ನೋಡಿದವರಿಗೆಲ್ಲಾ ವಿಸ್ಮಯವಾಯಿತು. ಧೂಮಕೇತು ನಿಕ್ಷೇಪರಾಯರುಗಳು ತಪ್ಪಿಸಿಕೊಂಡು ಓಡಿಹೋಗಲಿಕ್ಕೆ ನೋಡಿದರು. ಆದರೆ ಸಿಕ್ಕಿಬಿದ್ದರು. ಪೆಟ್ಟು ತಿಂದುಬಿದ್ದ ಮಾಲಿ, ಚೇತರಿಸಿಕೊಂಡು ರಾಜದಂಪತಿಗಳನ್ನೂ, ಪರಿವಾರವನ್ನೂ ಭದ್ರಾಲಯಕ್ಕೆ ಕರೆದುಕೊಂಡು ಬಂದನು. ಸಿಕ್ಕಿಬಿದ್ದ ಧೂಮಕೇತು ನಿಕ್ಷೇಪರಾಯರು ಪಶ್ಚಾತ್ತಾಪಪಟ್ಟರು. ಎಲ್ಲಾ ವಿಧಿವಿಲಾಸವೆಂದುಕೊಂಡು ರಾಜನು ಅವರ ಪಶ್ಚಾತ್ತಾಪವನ್ನು ಅನುಮೋದಿಸಿಕೊಂಡು ಶಿಕ್ಷಿಸದೆ ಅವರನ್ನು ಬಿಟ್ಟುಬಿಟ್ಟ.

ಚಂದನ ರಾಜನಿಗೂ ಗೌರಿಗೂ ಪಟ್ಟಾಭಿಷೇಕವಾಯಿತು. ಅವರು ಬಹಳ ಕಾಲ ಪ್ರಜೆಗಳನ್ನು ಹೆತ್ತಮಕ್ಕಳಂತೆ ಪಾಲಿಸುತ್ತಾ ಅತ್ಯಂತ ಸುಖವಾಗಿದ್ದರು.

ಅದೃಷ್ಟವಂತನನ್ನು ಕೆಡಿಸುವವರಿಲ್ಲ ;
ದುರದೃಷ್ಟವಂತನನ್ನು ಉಳಿಸುವವರಿಲ್ಲ.








Printed by B. NAGI REDDI at the B. N. K. Press Ltd, Madras 26, and Published by him for Chandamama Publications, Madras 26, Controlling Editor: 'SRI CHAKRAPANI'

Photo by D. I. Chanthamian



ಬಹುಮಾನ
ಪಡೆದ ಶೀರ್ಷಿಕೆ

ಸಹಾಯಕರು

ಕಳಿಸಿದವರು:
ಕೆ. ದೇವರಾಜರಾವ್, ಚಿತ್ರದುರ್ಗ

CHANDAMAMA (Kannada) JANUARY 1954 Regd. No. M. 5210




ಬಣ್ಣದ ಚಿತ್ರ ಕಥೆ-೧